KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜುಲೈ ೧೪, ೨೦೧೧, (ಆಷಾಢ ೨೩, ಶಕ ವರ್ಷ ೧೯೩೩) | ಸಂಚಿಕೆ ೨೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ. ಸಿದ್ದೋಜಿರಾವ್, ನಿವೃತ್ತ, ಪಿ.ಸಿ–648, 'ಡಿ' ದಳ 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, ಕೆ.ಎಸ್.ಆರ್.ಪಿ., 8ನೇ ಪಡೆ, ಶಿವಮೊಗ್ಗ, ಇವರ ಆದೇಶ ಸಂಖ್ಯೆ : 05/ಇವಿ(6)/ಸಿಬ್ಬಂದಿ(2)/2009–10, (ಓ.ಬಿ. 23/2010–11) ದಿನಾಂಕ : 13–4–2010.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು 05/2010–11 ದಿನಾಂಕ : 23–10–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 31–7–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)48/2010–11, ದಿನಾಂಕ : 4–1–2011.

ಪ್ರಸ್ತಾವನೆ :

ಶ್ರೀ ಸಿದ್ದೋಜಿರಾವ್, ಇವರು ಕೆ.ಎಸ್.ಆರ್.ಪಿ., 8ನೇ ಪಡೆ, ಶಿವಮೊಗ್ಗದಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

1. ಶ್ರೀ ಎಂ. ಸಿದ್ದೋಜಿರಾವ್, ಪಿ.ಸಿ–648, 'ಡಿ' ದಳ 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ ಆದ ನೀವು ದಿನಾಂಕ : 23–1–2009 ರಿಂದ ಇಲ್ಲಿಯವರೆಗೆ ನಿರಂತರವಾಗಿ ಅನಧಿಕೃತವಾಗಿ ಗೈರುಹಾಜರಾಗಿ, ಕರ್ತವ್ಯ ನಿರ್ಲಕ್ಷತೆ ಬೇಜವಾಬ್ದಾರಿ ಮತ್ತು ಅಶಿಸ್ತು ಪ್ರದರ್ಶಿಸಿರುವಿರಿ.
2. ಶ್ರೀ ಎಂ. ಸಿದ್ದೋಜಿರಾವ್, ಪಿ.ಸಿ–648, 'ಡಿ' ದಳ ಆದ ನೀವು ದಿನಾಂಕ : 23–1–2009 ರಿಂದ ನಿರಂತರವಾಗಿ ಗೈರುಹಾಜರಿಯಲ್ಲಿರುವ ನಿಮಗೆ ಕರ್ತವ್ಯಕ್ಕೆ ಮರಳಿ ಹಾಜರಾಗುವಂತೆ ಸೂಚಿಸಿ, ಮಾನ್ಯ ಕಮಾಂಡೆಂಟ್‌ರವರು, 8ನೇ ಪಡೆ, ಕೆ.ಎಸ್.ಆರ್.ಪಿ. ಶಿವಮೊಗ್ಗ ರವರು ಕರ್ತವ್ಯ ಪರಿತ್ಯಾಗ ಎಚ್ಚರಿಕೆ ನೋಟೀಸ್ ಸಂ. ಸಿಬ್ಬಂದಿ(2) : 98 : ಡಿಇ/2008–09 ದಿನಾಂಕ : 20–2–2009 ರಂದು ನೀಡಿದ್ದು, ನಿಮ್ಮ ಪತ್ನಿಯಾದ ಶ್ರೀಮತಿ ವೀಣಾರವರು ದಿನಾಂಕ : 3–3–2009 ರಂದು ಸ್ವೀಕರಿಸಿಕೊಂಡಿದ್ದು ನೀವುಗಳು ಕರ್ತವ್ಯಕ್ಕೆ ಹಾಜರಾಗದಿದ್ದರಿಂದ ಪುನಃ ಜ್ಞಾಪನವನ್ನು ದಿನಾಂಕ : 25–3–2009 ರಂದು ನೀಡಿ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿದ್ದು ಇಲ್ಲಿಯವರೆಗೆ ಕರ್ತವ್ಯಕ್ಕೆ ಹಾಜರಾಗದೇ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಬೇಜವಾಬ್ದಾರಿ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ.

3. ಶ್ರೀ ಎಂ. ಸಿದ್ದೋಜಿರಾವ್, ಪಿ.ಸಿ–648, 'ಡಿ' ದಳ ರವರ ಪತ್ನಿಯವರು ತನ್ನ ಪತಿ ಕಾಣೆಯಾದ ಬಗ್ಗೆ ಶಿವಮೊಗ್ಗ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ದೂರನ್ನು ಸಲ್ಲಿಸಿದ್ದು, ಅದನ್ನು ಠಾಣಾಧಿಕಾರಿಯವರು ಪಡೆದುಕೊಂಡು ಠಾಣಾ ಗುನ್ನೆ ನಂ. 90 : 2009 ಕಲಂ ಮನುಷ್ಯ ಕಾಣೆ ಪ್ರಕರಣವನ್ನು ದಾಖಲಿಸಿಕೊಂಡು ಇಲ್ಲಿಯವರೆಗೆ ತನಿಖೆಯನ್ನು ನಡೆಸಿರುತ್ತಾರೆ. ಆದರೂ ಸಹ ನಿಮ್ಮ ಇರುವಿಕೆಯ ಬಗ್ಗೆ ಯಾವುದೇ ಸುಳಿವು ಲಭ್ಯವಾಗಿರುವುದಿಲ್ಲ. ನೀವು ಸರ್ಕಾರಿ ಸೇವೆಯಲ್ಲಿದ್ದುಕೊಂಡು ನಿಮ್ಮ ಇರುವಿಕೆಯ ಬಗ್ಗೆ ಸುಳಿವನ್ನು ನೀಡದೇ ತಪ್ಪಿಸಿಕೊಂಡು ತಮ್ಮ ಕರ್ತವ್ಯ ಲೋಪವೆಸಗಿ ತೀವ್ರ ಕರ್ತವ್ಯ ನಿರ್ಲಕ್ಷತೆ ಬೇಜವಾಬ್ದಾರಿ ಮತ್ತು ಅಶಿಸ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಕಮಾಂಡೆಂಟ್, ಕೆ.ಎಸ್.ಆರ್.ಪಿ., 8ನೇ ಪಡೆ, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 13–4–2010ರ ಆದೇಶದಲ್ಲಿ ಅರ್ಜಿದಾರರನ್ನು ದಿನಾಂಕ : 14–4–2010 ರಿಂದ ಜಾರಿಗೆ ಬರುವಂತೆ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿ, ದಿನಾಂಕ : 23–1–09 ರಿಂದ 13–4–10ರ ವರೆಗೆ ಒಟ್ಟು 446 ದಿನಗಳನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 23–10–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅನಧಿಕೃತವಾಗಿ ಗೈರುಹಾಜರಾಗಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 133 ಪೊಸಿಅ 2010, ಬೆಂಗಳೂರು, ದಿನಾಂಕ : 5–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಸಿದ್ದೋಜಿರಾವ್, ನಿವೃತ್ತ, ಪಿ.ಸಿ–648, 'ಡಿ' ದಳ 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1042

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ತಮಕುಂಟಾ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 14–12–2010ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/6578.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ತಮಕುಂಟಾ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ತಮಕುಂಟಾ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ಪತ್ರದಲ್ಲಿ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 05–04–2007.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 02–11–2008.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಚಿಂಚೋಳಿ ಸಿವಿಲ್ (ಹಿರಿಯ ವಿಭಾಗ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣವನ್ನು ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆ ರೂ. 1,57,000/–ಗಳನ್ನು ನಿಗಡಿಪಡಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಪತ್ರ ಸಂಖ್ಯೆ: ಆರ್‌ಡಿ 426 ಎಲ್‌ಸಿಜಿ 2010 ದಿನಾಂಕ: 03–09–2010, ಆರ್‌ಡಿ 405 ಎಲ್‌ಸಿಜಿ 2010, ದಿನಾಂಕ: 09–06–2010, ಆರ್‌ಡಿ 408 ಎಲ್‌ಸಿಜಿ 2010, ದಿನಾಂಕ: 09–06–2010 ಆರ್‌ಡಿ 413 ಎಲ್‌ಸಿಜಿ 2010, ದಿನಾಂಕ: 09–06–2010, ಆರ್‌ಡಿ 407 ಎಲ್‌ಸಿಜಿ 2010, ದಿನಾಂಕ: 09–06–2010, ಆರ್‌ಡಿ 409 ಎಲ್‌ಸಿಜಿ 2010, ದಿನಾಂಕ: 09–06–2010, ಆರ್‌ಡಿ 410 ಎಲ್‌ಸಿಜಿ 2010, ದಿನಾಂಕ: 09–06–2010, ಆರ್‌ಡಿ 411 ಎಲ್‌ಸಿಜಿ 2010, ದಿನಾಂಕ: 09–06–2010, ಆರ್‌ಡಿ 406 ಎಲ್‌ಸಿಜಿ 2010, ದಿನಾಂಕ 09–06–2010, ಆರ್‌ಡಿ 410 ಎಲ್‌ಸಿಜಿ 2010, ದಿನಾಂಕ: 09–06–2010 ಮತ್ತು ಆರ್‌ಡಿ 412 ಎಲ್‌ಸಿಜಿ

2010, ದಿನಾಂಕ: 09-06-2010ರಲ್ಲಿ ಅಭಿಪ್ರಾಯ ನೀಡಿದೆ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ತಮಕುಂಟಾ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 36/09 | 39/4 | 0-12 | 66051 |
| 2 | 39/09 | 53/2 | 0-20 | 109886 |
| 3 | 40/09 | 56/1 | 0-03 | 16738 |
| 4 | 41/09 | 63/3 | 0-04 | 22217 |
| 5 | 42/09 | 36/2A | 11-01 | 2416657 |
| 6 | 46/09 | 66/3 | 0-22 | 120843 |
| 7 | 47/09 | 63/1 | 0-11 | 60572 |
| 8 | 50/09 | 49/2 | 0-27 | 148240 |
| 9 | 69/09 | 81/C | 0-04 | 22217 |
| 10 | 71/09 | 48/2 | 1-06 | 252346 |
| | ಒಟ್ಟು | | | 3235767 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 08 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 24ನೇ ಮಾರ್ಚ್-2011**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ತಮಕುಂಟಾ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ತಮಕುಂಟಾ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 32,35,767-00 ಗಳನ್ನು (ಮೂವತ್ತೆರಡು ಲಕ್ಷದ ಮೂವತ್ತೈದು ಸಾವಿರದ ಏಳುನೂರ ಅರವತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳುಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19-03-2011 ರಲ್ಲಿ ಒದಗಿಸಿರುವ ಪೂರಕ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20-10-2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿಆರ್.ನಂ. 901

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಠಗಿ ತಾಲ್ಲೂಕು ಟೆಂಗುಂಟೆ ಇಂಗು ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಅವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010-11/4317, ದಿನಾಂಕ 28-07-2010.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ ಕುಷ್ಠಗಿ ತಾಲ್ಲೂಕು, ಟೆಂಗುಂಟೆ ಇಂಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಟೆಂಗುಂಟೆ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ ವಲಯ ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 28-07-2010ರ ಪತ್ರದಲ್ಲಿ ಕೋರಿರುತ್ತಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ: 03-04-2003 ರಂದು ಹೊರಡಿಸಿದೆ.

ಭೂಸ್ವಾಧೀನಾಧಿಕಾರಿಗಳು ದಿನಾಂಕ: 05-01-2005 ರಂದು ಐತೀರ್ಪು ರಚಿಸಿದ್ದಾರೆ.

ಭೂಸ್ವಾಧೀನಕೊಳಪಟ್ಟ ಟೆಂಗುಂಟೆ ಗ್ರಾಮದ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ರಚಿಸಿದ ಪರಿಹಾರ ಐತೀರ್ಪಿನಂತೆ ಹಣ ಪಡೆದು. ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಕುಷ್ಠಗಿ ಇಲ್ಲಿ ಕೆಳಕಂಡ ಪ್ರಕರಣಗಳನ್ನು ಸಲ್ಲಿಸಿದ್ದು. ನ್ಯಾಯಾಲಯವು ದಿನಾಂಕ: 31–07–2008 ರಂದು ತೀರ್ಪು ಆದೇಶದಲ್ಲಿ ಹೆಚ್ಚಿನ ಪರಿಹಾರ ನಿಗಧಿಪಡಿಸಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 423 ಎಲ್‌ಸಿಜಿ 2009, ದಿನಾಂಕ: 23–05–2009 ರಂದು ಅಭಿಪ್ರಾಯ ನೀಡಿರುತ್ತದೆ.

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ಟೆಂಗುಂಟೆ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ |
|---|---|---|---|---|
| 1 | 75/07 | 25/ಉ | 0–05 | 41314 |
| 2 | 76/07 | 25/1ಇ | 0–03 | 24989 |
| 3 | 77/07 | 25/1ಈ | 1–00 | 327003 |
| 4 | 78/07 | 26/2 | 0–14 | 114775 |
| 5 | 79/07 | 25/1ಎ | 1–00 | 327003 |
| 6 | 80/07 | 25/ಆ | 0–12 | 98450 |
| 7 | 81/07 | 26/1 | 1–00 | 327003 |
| 8 | 82/07 | 25/ಊ | 0–10 | 82125 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 111 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24–03–2011**

ಕೊಪ್ಪಳ ಜಿಲ್ಲೆ, ಕುಷ್ಠಗಿ ತಾಲ್ಲೂಕು ಟೆಂಗುಂಟೆ ಇಂಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಟೆಂಗುಂಟೆ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನಂತೆ ಪರಿಹಾರ ರೂ. 12,95,181–00ಗಳನ್ನು (ಹನ್ನೆರಡು ಲಕ್ಷದ ತೊಂಭತ್ತೈದು ಸಾವಿರದ ನೂರ ಎಂಭತ್ತೊಂದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ. ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–0–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿಆರ್.ನಂ. 902

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಹಸರಗುಂಡಗಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/726, ದಿನಾಂಕ 14–12–2010.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಹಸರಗುಂಡಗಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹಸರಗುಂಡಗಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 10–12–81

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 22–05–1984.

ಭೂಸ್ವಾಧೀನಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಚಿಂಚೋಳಿ ಸಿವಿಲ್ (ಹಿರಿಯ ವಿಭಾಗ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣವನ್ನು ದಾಖಲಿಸಿದ್ದು. ನ್ಯಾಯಾಲಯವು ಪ್ರತಿ ಎಕರೆಗೆ ರೂ. 21,000/–ಗಳನ್ನು ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 849 ಎಲ್‌ಸಿಜಿ 2009, ದಿನಾಂಕ 15–09–2010ರಲ್ಲಿ ಅಭಿಪ್ರಾಯ ನೀಡಿದೆ. ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಎಲ್‌ಎಸಿ | ಹಸರಗುಂಡಗಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 161/09 | 5/0, 23 | 4–09 | 364325 |
| 2 | 162/09 | 8/1 | 4–32 | 413570 |
| 3 | 163/09 | 5/0, 22 | 2–21 | 217854 |
| 4 | 164/09 | 8/2 | 4–14 | 375100 |
| 5 | 165/09 | 8/3 | 3–36 | 336324 |
| 6 | 166/09 | 6, 15/4 | 0–17 | 36923 |
| 7 | 167/09 | 13, 17, 11/2 | 7–09 | 622806 |
| 8 | 168/09 | 184, 53 | 2–26 | 228623 |
| 9 | 169/09 | 46/1 | 2–30 | 237241 |
| 10 | 170/09 | 46/2 | 2–02 | 176927 |
| 11 | 171/09 | 47 | 4–02 | 349251 |
| 12 | 172/09 | 54 | 0–15 | 32610 |
| 13 | 173/09 | 15/3 | 0–08 | 17531 |
| 14 | 174/09 | 12/0 | 1–19 | 127384 |
| 15 | 175/09 | 9 | 0–30 | 64923 |
| 16 | 176/09 | 7 | 4–05 | 355707 |
| | **ಒಟ್ಟು** | | | **3957099** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 30 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 24–03–2011**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಹಸರಗುಂಡಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹಸರಗುಂಡಗಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಪರಿಹಾರ ಮೊತ್ತ ರೂ. 39,57,099–00 ಗಳನ್ನು (ಮೂವತ್ತೊಂಭತ್ತು ಲಕ್ಷದ ಐವತ್ತೇಳು ಸಾವಿರದ ತೊಂಭತ್ತೊಂಭತ್ತು ರೂಪಾಯಿಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ. ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ **ಲೆಕ್ಕಶೀರ್ಷಿಕೆ "4702–0–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು"** ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿಆರ್.ನಂ. 903

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಪುರದಾಳ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾ/2010–11/3782, ದಿನಾಂಕ 01–07–2010.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಪುರದಾಳ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೋರವಾರ ಗ್ರಾಮದ ಜಮೀನುಗಳಿಗೆ ಬಿಜಾಪುರದ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 27–04–2000ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಭೂ ಮಾಲೀಕರು ದಿನಾಂಕ: 21–05–2002 ರಂದು ರಚಿಸಿದ ಐತೀರ್ಪಿನ ಪ್ರಕಾರ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಬಿಜಾಪುರ ಇಲ್ಲಿ ಸಲ್ಲಿಸಿದ ಎಲ್‌ಎಸಿ 121/03, 126/03, 131/03, 192/03 ಮತ್ತು 197/03 ಪ್ರಕರಣಗಳಲ್ಲಿ ದಿನಾಂಕ 24–06–2006 ರಂದು ನೀಡಿರುವ ಆದೇಶದಲ್ಲಿ ಪರಿಹಾರವನ್ನು ರೂ. 35,250/–ಕ್ಕೆ ಹೆಚ್ಚಿಸಿದೆ. ಈ ಪ್ರಕರಣಗಳಲ್ಲಿ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಾನೂನು ಕೋಶದ ಮುಖ್ಯಸ್ಥರು ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 103 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಪುರದಾಳ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕೋರವಾರ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಪರಿಹಾರ ಧನ ಮೊತ್ತ ರೂ. 13,96,866–00 ಗಳನ್ನು (ಹದಿಮೂರು ಲಕ್ಷದ ತೊಂಭತ್ತಾರು ಸಾವಿರದ ಎಂಟು ನೂರ ಅರವತ್ತಾರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೆ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ **"4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು"** ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿಆರ್.ನಂ. 904

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೆಂಚಮಟ್ಟಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಅವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/4118, ದಿನಾಂಕ 19–07–2010.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೆಂಚಮಟ್ಟಿ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಕೊಪ್ಪಳ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 19–07–2010ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ: 03–10–1996ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ: 18–07–1999 ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ದಾಖಲಿಸಿದ್ದ ಪ್ರಕರಣಗಳಲ್ಲಿ ದಿನಾಂಕ: 20–11–2008 ರಂದು ನೀಡಿರುವ ಸಾಮಾನ್ಯ ಆದೇಶದಲ್ಲಿ ಹೆಚ್ಚಿನ ಪರಿಹಾರ ಧನ ನಿಗದಿಪಡಿಸಿದೆ. ಈ ತೀರ್ಪಿನಲ್ಲಿ ಸೇರಿದ್ದ ಕೆಳಕಂಡ ಎಲ್.ಎ.ಸಿ. ಪ್ರಕರಣಗಳ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿಯನ್ನು ವಜಾ ಮಾಡಿದೆ. ಆದ್ದರಿಂದ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಬೆಂಚಮಟ್ಟಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 410/2000 | 3926/05 | 12/3A | 3–00 | 813785 |
| 2 | 412/2000 | 3932/05 | 12/4 | 3–01 | 820562 |
| 3 | 416/2000 | 3936/05 | 12/5A | 2–00 | 542689 |
| | | | ಒಟ್ಟು | | **2177036** |

ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹವಲ್ಲವೆಂದು ಕಾನೂನು ಇಲಾಖೆಯ ಪತ್ರ ಸಂಖ್ಯೆ: ಲಾ 536 ಎಲ್ಎಸ್‌ಪಿ 2009, ದಿನಾಂಕ: 04–06–2009, ಲಾ 471 ಎಲ್ಎಸ್‌ಪಿ 2009, ದಿನಾಂಕ: 15–05–2009 ಮತ್ತು ಲಾ 1974 ಎಲ್ಎಸ್‌ಪಿ 2006, ದಿನಾಂಕ: 29–11–2006ರಲ್ಲಿ ಅಭಿಪ್ರಾಯಪಟ್ಟಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 108 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೆಂಚಮಟ್ಟಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ ಎಲ್.ಎ.ಸಿ. ಸಂಖ್ಯೆ: 410, 412, 416/2000 ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ಪಾವತಿಸಲು ರೂ. 21,77,036–00ಗಳನ್ನು (ಇಪ್ಪತ್ತೊಂದು ಲಕ್ಷದ ಎಪ್ಪತ್ತೇಳು ಸಾವಿರದ ಮೂವತ್ತಾರು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗೊಳಪಟ್ಟು ನೀಡಲು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ. ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ **ಲೆಕ್ಕಶೀರ್ಷಿಕೆ "4702-00-800-1-00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು"** ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿಆರ್.ನಂ. 905

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶಾನುಸಾರ ಪರಿಹಾರ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಅವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/47, ದಿನಾಂಕ 04-01–2011.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಹಸರಗುಂಡಗಿ ಮತ್ತು ಸಾಲೇಬೀರನಹಳ್ಳಿ ಗ್ರಾಮದ ಜಮೀನುಗಳಿಗೆ ಚಿಂಚೋಳಿ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯವು ನೀಡಿರವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ರೂ. 8,32,799/–ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ, ಇವರು ಮೇಲೆ ಓದಲಾದ ದಿನಾಂಕ: 08–12–2010ರ ಪತ್ರದಲ್ಲಿ ಕೋರಿರುತ್ತಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ದಿನಾಂಕ: 05–04–2007 ರಂದು ಹೊರಡಿಸಿದೆ.

ಭೂಸ್ವಾಧೀನಾಧಿಕಾರಿಗಳು ಐತೀರ್ಪು ಹೊರಡಿಸಿದ ದಿನಾಂಕ: 12–11–2008.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂ ಮಾಲೀಕರು ಐತೀರ್ಪಿನಂತೆ ಹಣ ಪಡೆದ ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಚಿಂಚೋಳಿ ಇಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣಗಳಲ್ಲಿ ನ್ಯಾಯಾಲಯವು ಪ್ರತಿ ಎಕರೆಗೆ ರೂ. 1,57,000/–ಗಳಿಗೆ ಹೆಚ್ಚಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 459 ಎಲ್‌ಸಿಜಿ 10, ಆರ್‌ಡಿ 460 ಎಲ್‌ಸಿಜಿ 10 ಆರ್‌ಡಿ 414 ಎಲ್‌ಸಿಜಿ 10 ಆರ್‌ಡಿ, 425 ಎಲ್‌ಸಿಜಿ 10, ಆರ್‌ಡಿ 458 ಎಲ್‌ಸಿಜಿ 10, ದಿನಾಂಕ: 09–06–2010ರ ಪತ್ರಗಳಲ್ಲಿ ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ಸ.ನಂ | ಗ್ರಾಮ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 58/09 | 67 | ಹಸರಗುಂಡಗಿ | 0–20 | 114177 |
| 2 | 59/09 | 67 | ಹಸರಗುಂಡಗಿ | 0–35 | 199584 |
| 3 | 60/09 | 67 | ಹಸರಗುಂಡಗಿ | 0–35 | 199584 |
| 4 | 62/09 | 23/1 | ಸಾಲೇಬೀರನಹಳ್ಳಿ | 0–14 | 80013 |
| 5 | 65/09 | 101/2/4<br>102/2/4, | ಸಾಲೇಬೀರನಹಳ್ಳಿ | 1–02 | 239441 |
| | ಒಟ್ಟು | | | | **832799** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ನ್ಯಾಯಾಲಯದ ಆದೇಶದಂತೆ ಪರಿಹಾರ ನೀಡಲು ನಿರ್ಧರಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 18 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 24–03–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆಯ ಬಲದಂಡೆ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಹಸರಗುಂಡಗಿ ಮತ್ತು ಸಾಲೇಬೀರನಹಳ್ಳಿ ಗ್ರಾಮಕ್ಕೆ ಸೇರಿದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನಂತೆ ರೂ. 8,28,983–00 (ಎಂಟು ಲಕ್ಷದ ಇಪ್ಪತ್ತೆಂಟು ಸಾವಿರದ ಒಂಭೈನೂರ ಎಂಭತ್ತೂರು ರೂಪಾಯಿಗಳು ಮಾತ್ರ)ಗಳ ಪರಿಹಾರ ಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ. ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ **ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು"** ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 906

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಭೂಸ್ವಾಪ್ರ/2010–11/915, ದಿನಾಂಕ 22–02–2011.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಚಿಂಚೋಳಿ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸಲು ರೂ. 31,47,649–00ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, (ಉತ್ತರ) ವಲಯ ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 22–02–2011ರ ಪತ್ರದಲ್ಲಿ ಕೋರಿದ್ದಾರೆ. ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 04–04–1995
– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 02–12–1997.

ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸೇಡಂ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ಪ್ರತಿ ಎಕರೆಗೆ ರೂ. 34,650/–ಗಳ ಬೆಲೆಯನ್ನು ನಿಗದಿಪಡಿಸಿ, ಈ ಮೊತ್ತದ ಮೇಲೆ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿಗೆ ತೃಪ್ತರಾಗದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರ ಧನಕ್ಕಾಗಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ (ಎಂಎಫ್ಎ) ದಾಖಲಿಸಿದ್ದು ಮಾನ್ಯ ನ್ಯಾಯಾಲಯವು ಮೇಲ್ಮನವಿಯ ಅಡ್ಡ ತಕರಾರು ಅರ್ಜಿಗಳಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆಗೆ ನಿಗದಿಪಡಿಸಿದ್ದ ರೂ. 30,900/–ಗಳಿಂದ ರೂ. 47,880–00ಗಳಿಗೆ ಹೆಚ್ಚಿಸಿ ಹಾಗೂ ಭೂಸ್ವಾಧೀನ ಕಾಯ್ದೆಯಡಿಯ ಇತರೆ ಸವಲತ್ತುಗಳನ್ನು ನೀಡಲು ತೀರ್ಪು ನೀಡಿದೆ. ಎಂ.ಎಫ್.ಎ. ಪ್ರಕರಣಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯ ಪತ್ರ ಸಂಖ್ಯೆ: ಲಾ 681 ಎಲ್ಎಸ್‌ಪಿ 2008, ದಿನಾಂಕ 05–05–2008ರಲ್ಲಿ ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಧನದ ವಿವರ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಎಲ್ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಕೊಡ್ಲಿ ಅಲ್ಲಾಪುರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 412/02 | 7349/06 | 37 | 3–20 | 210537 |
| 2 | 413/02 | 7350/06 | 41 | 7–30 | 466185 |
| 3 | 414/02 | 7351/06 | 42 | 5–00 | 300764 |
| 4 | 415/02 | 7352/06 | 37 | 3–20 | 210534 |
| 5 | 417/02 | 7353/06 | 39 | 2–32 | 769959 |
| 6 | 418/02 | 7354/06 | 42 | 5–00 | 300764 |
| 7 | 419/02 | 7355/06 | 36/B | 3–33 | 230087 |
| | ಒಟ್ಟು | | | | **2488830** |

***ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದಲ್ಲಿ ವೆಚ್ಚ ಸಹ ಸೇರಿದೆ.**

ವಿಷಯವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 33 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕೊಡ್ಲಿ ಅಲ್ಲಾಪುರ ಗ್ರಾಮಕ್ಕೆ ಸೇರಿದ ಪ್ರಸ್ತಾವನೆಯಲ್ಲಿ ನಮೂದಿಸಿರುವ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 24,88,830–00 ಗಳನ್ನು (ಇಪ್ಪತ್ತಾನ್ನಲ್ಕು ಲಕ್ಷದ ಎಂಬತ್ತೆಂಟು ಸಾವಿರದ ಎಂಟುನೂರ ಮೂವತ್ತು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಲೆಕ್ಕಾಚಾರ ತಃಖ್ತೆಯನ್ನು ಮತ್ತೊಮ್ಮೆ ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಹೆಚ್ಚಿನ ಮೊತ್ತ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿಆರ್.ನಂ. 907

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳ ಕೆರೆ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1–3/ಭೂಸ್ವಾಧೀನ/2010–11/1846, ದಿನಾಂಕ 18–08–2010.

**ಪ್ರಸ್ತಾವನೆ:**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳ ಕೆರೆ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಲ್ಲನಕುಪ್ಪೆ ಗ್ರಾಮಕ್ಕೆ ಸೇರಿದ ಸ.ನಂ. 26 ಮತ್ತು 27ರ 4–22 ಎಕರೆ ಜಮೀನಿಗೆ ವಿಶೇಷ ಭೂಸ್ವಾಧೀನಾಧಿಕಾರಿ, ರಾಮನಗರ ಜಿಲ್ಲೆ, ರಾಮನಗರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೊರಡಿಸಿದ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ರೂ. 12,41,454–00ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಇವರು ಮೇಲೆ ಓದಲಾದ ದಿನಾಂಕ 18–08–2010ರ ಪತ್ರದಲ್ಲಿ ಕೋರಿರುತ್ತಾರೆ.

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕಿನ ರಾವುತನಹಳ್ಳ ಕೆರೆ ನೀರಾವರಿ ಯೋಜನೆಗಾಗಿ ಅಗತ್ಯವಿದ್ದ ಜಮೀನುಗಳ ಸ್ವಾದೀನಕ್ಕಾಗಿ 4(1)ರ ಅಧಿಸೂಚನೆಯನ್ನು ದಿನಾಂಕ 07–03–85ರಂದು ಹೊರಡಿಸಿದೆ. ಭೂಸ್ವಾಧೀನಪಡಿಸಿಕೊಂಡ ಜಮೀನಿಗೆ ಐತೀರ್ಪನ್ನು ದಿನಾಂಕ 24–08–87ರಂದು ಹೊರಡಿಸಿದ್ದು, ಪ್ರತಿ ಎಕರೆ ಖುಷ್ಕಿ ಜಮೀನಿಗೆ ರೂ. 10,000–00 ನಿಗದಿ ಮಾಡಲಾಗಿದೆ.

ಐತೀರ್ಪಿನಂತೆ ಪರಿಹಾರ ಪಡೆದ ಕಲ್ಲನಕುಪ್ಪೆ ಗ್ರಾಮದ ಸ.ನಂ. 36ರ 2–00 ಎಕರೆ ಜಮೀನಿನ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ರಾಮನಗರ ಇಲ್ಲಿ ಎಲ್.ಎ.ಸಿ. ಸಂಖ್ಯೆ:29/88ನ್ನು ಸಲ್ಲಿಸಿದ್ದು, ನ್ಯಾಯಾಲಯವು ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ. 50,000/–ಗಳಿಗೆ ಹೆಚ್ಚಿಸಿ ಭೂಸ್ವಾಧೀನ ಕಾಯ್ದೆಯ ಇತರೆ ಸವಲತ್ತುಗಳೊಂದಿಗೆ ಪರಿಹಾರ ನೀಡುವಂತೆ ದಿನಾಂಕ: 19–09–09ರಂದು ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹ ಪ್ರಕರಣವಲ್ಲವೆಂದು ಕಂದಾಯ ಇಲಾಖೆ ಪತ್ರ ಸಂಖ್ಯೆ: ಆರ್‌ಡಿ 261 ಎಲ್‌ಸಿಎ 2009, ದಿನಾಂಕ 24–12–2009ರಂದು ಅಭಿಪ್ರಾಯ ಪಟ್ಟಿರುತ್ತಾರೆ.

ಈ ಆದೇಶ ಉಲ್ಲೇಖಿತ ಭೂಸ್ವಾಧೀನಕ್ಕೊಳಪಟ್ಟ ಕಲ್ಲಕುಪ್ಪೆ ಗ್ರಾಮದ ಸ.ನಂ.26ರ 0–25 ಎಕರೆ ಹಾಗೂ ಸರ್ವೆ ನಂ.27ರ 3–37ರ ಜಮೀನಿನ ಭೂಮಾಲೀಕರು ಹೆಚ್ಚಿನ ಪರಿಹಾರಕ್ಕೆ ಸಲ್ಲಿಸಿದ್ದ ಅರ್ಜಿಯನ್ನು ಪರಿಶೀಲಿಸಿ ವಿಶೇಷ ಭೂಸ್ವಾಧೀನಾಧಿಕಾರಿಗಳು ರಾಮನಗರ ಜಿಲ್ಲೆ, ರಾಮನಗರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ದಿನಾಂಕ 06–07–2010ರಂದು ಐತೀರ್ಪನ್ನು ಹೊರಡಿಸಿರುತ್ತಾರೆ. ಐತೀರ್ಪಿನಂತೆ ಪಾವತಿಸಬೇಕಾದ ಸ.ನಂ.ವಾರು ಮೊತ್ತದ ವಿವರ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಗ್ರಾಮ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 26 | 0–25 | ಕಲ್ಲಕುಪ್ಪೆ | 12,41,454 |
| 2 | 27 | 3–37 | ಕಲ್ಲಕುಪ್ಪೆ | |
| | ಒಟ್ಟು | | | 12,41,454 |

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 127 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳ ಕೆರೆ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಲ್ಲನಕುಪ್ಪೆ ಗ್ರಾಮದ ಪ್ರಸ್ತಾವನೆಯಲ್ಲಿ ತಿಳಿಸಿರುವ ಸರ್ವೆ ನಂಬರ್‌ಗಳ ಜಮೀನುಗಳಿಗೆ ವಿಶೇಷ ಭೂಸ್ವಾಧೀನಾಧಿಕಾರಿ, ರಾಮನಗರ ಜಿಲ್ಲೆ, ರಾಮನಗರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೊರಡಿಸಿದ ಐತೀರ್ಪಿನಂತೆ ರೂ. 12,41,454–00ಗಳ (ಹನ್ನೆರಡುಲಕ್ಷದ ನಲವತ್ತೊಂದು ಸಾವಿರದ ನಾನೂರ ಐವತ್ತ್ನಾಲ್ಕು ರೂ.ಗಳು ಮಾತ್ರ) ಪರಿಹಾರ ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ಕೂಡಲೆ ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 908

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಯಾದಗೀರ್ ಜಿಲ್ಲೆ, ಸುರಪೂರ ತಾಲ್ಲೂಕು, ಭೈರಮಡ್ಡಿ ಸಣ್ಣ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2010–11/6438, ದಿನಾಂಕ 08–12–2010.

**ಪ್ರಸ್ತಾವನೆ:**

ಯಾದಗೀರ ಜಿಲ್ಲೆ, ಸುರಪೂರ ತಾಲ್ಲೂಕು, ಭೈರಮಡ್ಡಿ ಸಣ್ಣ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 08–12–2010ರ ಪತ್ರದಲ್ಲಿ ಕೋರಿರುತ್ತಾರೆ.

- ಈ ಪ್ರಕರಣದಲ್ಲಿ ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ 11–01–2007 ರಂದು ಹೊರಡಿಸಿದೆ.
- ಭೂಸ್ವಾಧೀನಾಧಿಕಾರಿಗಳು ದಿನಾಂಕ 12–10–2007ರಂದು ರಚಿಸಿದ ಐತೀರ್ಪಿನಲ್ಲಿ ಈ ಜಮೀನಿಗೆ ಪ್ರತಿ ಎಕರೆಗೆ ರೂ. 45,000/– ಮಾರುಕಟ್ಟೆ ಬೆಲೆ ನಿಗದಿ ಮಾಡಿದ್ದಾರೆ.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಐತೀರ್ಪಿನಂತೆ ಪರಿಹಾರ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ 1894ರ ಕಲಂ 18(1)ರಡಿ ಸುರಪೂರ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್‌ಎಸಿ ನಂ 32/2008ನ್ನು ಸಲ್ಲಿಸಿದ್ದು. ನ್ಯಾಯಾಲಯ ದಿನಾಂಕ 11–03–2009ರಂದು ನೀಡಿದ ಆದೇಶದಲ್ಲಿ ಈ ಜಮೀನಿನ ಮಾರುಕಟ್ಟೆ ಬೆಲೆಯನ್ನು ರೂ. 67,060/–ಗಳಿಗೆ ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 421 ಎಲ್‌ಸಿಜಿ 2009, ದಿನಾಂಕ: 07–08–2010 ರಂದು ಅಭಿಪ್ರಾಯ ನೀಡಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 160 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಗುಲ್ಬರ್ಗಾ ಜಿಲ್ಲೆ ಸುರಪೂರ ತಾಲ್ಲೂಕು, ಭೈರಮಡ್ಡಿ ಸಣ್ಣ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಸರ್ವೆ ನಂಬರ್ ಜಮೀನಿಗೆ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಪರಿಹಾರ ರೂ. 3,48,603–00 (ಮೂರು ಲಕ್ಷದ ನಲವತ್ತೆಂಟು ಸಾವಿರದ ಆರುನೂರ ಮೂರು ರೂಪಾಯಿಗಳು ಮಾತ್ರ)ಗಳನ್ನು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯಲ್ಲಿ ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 909

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾ/ಲೆಸ–1/ಭೂಸ್ವಾಧೀನ/2010–11/1792, ದಿನಾಂಕ 07–08–2010.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭಟ್ರಳ್ಳಿ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಚಳ್ಳಕೆರೆ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ: 07/06ರಲ್ಲಿ ದಿನಾಂಕ 18–10–2008ರಂದು ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ರೂ. 1,30,855–00ಗಳನ್ನು ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ 07–08–2010ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ: 17–05–2001ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಭಟ್ರಳ್ಳಿ ಗ್ರಾಮದ ಸ.ನಂ. 15/1ಪಿ 1–21 ಎಕರೆ ಜಮೀನಿನ ಭೂಮಾಲೀಕರು ದಿನಾಂಕ: 28–01–2004ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಚಳ್ಳಕೆರೆ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಸಂಖ್ಯೆ: 07/06ನ್ನು ಸಲ್ಲಿಸಿದ್ದು ನ್ಯಾಯಾಲಯವು ಜಮೀನಿನ ಭೂಮೌಲ್ಯವನ್ನು ಪ್ರತಿ ಎಕರೆಗೆ ರೂ. 37,200/–ಗಳಿಗೆ ಹೆಚ್ಚಿಸಿ ಆದೇಶಿಸಿದೆ. ನ್ಯಾಯಾಲಯದ ಆದೇಶದಂತೆ ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಎಲ್.ಎ.ಸಿ. ಸಂಖ್ಯೆ | ಭಟ್ರಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 07/06 | 15/IP | 1–21 | 1,25,296–00 |
| | ಒಟ್ಟು | | | **1,25,296–00** |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹವಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 558 ಎಲ್‌ಸಿಎ 2008, ದಿನಾಂಕ 06–02–2010ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಮತ್ತು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 122 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭಟ್ರಳ್ಳಿ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 07/06ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 1,25,296–00ಗಳನ್ನು (ಒಂದು ಲಕ್ಷದ ಇಪ್ಪತ್ತೈದು ಸಾವಿರದ ಇನ್ನೂರ ತೊಂಭತ್ತಾರು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ: 19–03–2011ರಲ್ಲಿ ಒದಗಿಸಿರುವ ಪೂರಕ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 910

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ಬಾಗಲಕೋಟೆ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–18014/01/2010–11 ಡಿಆರ್‌ಡಿಎ (ಎಸ್‌ಎಲ್‌ನಂ. 10) ದಿನಾಂಕ 17–5–2010.
2. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ: 3–8–2010 ಮತ್ತು ದಿನಾಂಕ : 17–8–2010.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/10/2010–11 ಡಿಆರ್‌ಡಿಎ (ಎಸ್‌ಎಲ್‌ನಂ. 34) ದಿನಾಂಕ : 15–7–2010.
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/10/2010–11 ಡಿಆರ್‌ಡಿಎ (ವಾಲ್ಯೂಂ. III) (ಎಸ್‌ಎಲ್‌ನಂ. 101) ದಿನಾಂಕ : 2–2–2011.
5. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/10/2010–11 ಡಿಆರ್‌ಡಿಎ (ವಾಲ್ಯೂಂ. I) (ಎಸ್‌ಎಲ್‌ನಂ. 106) ದಿನಾಂಕ : 3–2–2011.
6. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/10/2010–11 ಡಿಆರ್‌ಡಿಎ (ವಾಲ್ಯೂಂ. II) (ಎಸ್‌ಎಲ್‌ನಂ. 107) ದಿನಾಂಕ : 4–2–2011.
7. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/10/2010–11 ಡಿಆರ್‌ಡಿಎ (ವಾಲ್ಯೂಂ. I) (ಎಸ್‌ಎಲ್‌ನಂ. 139) ದಿನಾಂಕ : 28–2–2011.

8. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/10/2010–11 ಡಿಆರ್‌ಡಿಎ (ವಾಲ್ಯೂಂ. III) (ಎಸ್‌ಎಲ್‌ನಂ. 141) ದಿನಾಂಕ : 3–3–2011.
9. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/10/2010–11 ಡಿಆರ್‌ಡಿಎ (ವಾಲ್ಯೂಂ. II) (ಎಸ್‌ಎಲ್‌ನಂ. 147) ದಿನಾಂಕ : 3–3–2011.
10. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ : 14–3–2011 ಮತ್ತು ತಿದ್ದುಪಡಿ ದಿನಾಂಕ : 18–3–2011.
11. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/10/2010–11 ಡಿಆರ್‌ಡಿಎ (ಎಸ್‌ಎಲ್‌ನಂ. 158) ಸಂದಾಯ ದಿನಾಂಕ : 15–3–2011.

ಪ್ರಸ್ತಾವನೆ :

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25 ರ ಅನುಪಾತದಲ್ಲಿ ಭರಿಸುತ್ತದೆ. 2010–11ನೇ ಸಾಲಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರಾಜ್ಯದ ಎಲ್ಲಾ 30 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಒಂದನೇ ಕಂತಿನ ಅನುದಾನ ರೂ. 9,15,02,000 ಮತ್ತು ರೂ. 3,05,00,000 ಗಳನ್ನು ಅನುಕ್ರಮವಾಗಿ ಓದಲಾಗಿದೆ 1 ರಿಂದ 3 ರವರೆಗೆ ಬಿಡುಗಡೆ ಮಾಡಿವೆ.

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (4) ರಿಂದ (9) ರ ಪತ್ರಗಳಲ್ಲಿ ರಾಜ್ಯದ 25 ಜಿಲ್ಲಾ ಪಂಚಾಯಿತಿಗಳಿಗೆ (ಬಾಗಲಕೋಟೆ, ಚಿಕ್ಕಮಗಳೂರು, ಗುಲ್ಬರ್ಗಾ, ಕೋಲಾರ ಮತ್ತು ಯಾದಗಿರಿ ಹೊರತುಪಡಿಸಿ) ಎರಡನೇ ಕಂತಿನ ಅನುದಾನ ರೂ. 3,16,39,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 1,05,48,000 ಗಳನ್ನು ಬಿಡುಗಡೆ ಮಾಡಬೇಕಾಗಿತ್ತು. ಆದರೆ, ಹಾಸನ ಮತ್ತು ಮಂಡ್ಯ ಜಿಲ್ಲಾ ಪಂಚಾಯತಿಗಳಿಗೆ 2010–11ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಕಾಯ್ದಿರಿಸಿದ ಅನುದಾನಕ್ಕೆ ಸೀಮಿತಗೊಳಿಸಿ, ಒಟ್ಟಾರೆಯಾಗಿ ರೂ. 98,80,000 ಗಳನ್ನು ರಾಜ್ಯದ ಪಾಲಿನ ಅನುದಾನವಾಗಿ 25 ಜಿಲ್ಲಾ ಪಂಚಾಯತಿಗಳಿಗೆ ಓದಲಾಗಿದೆ (10)ರ ಆದೇಶಗಳಲ್ಲಿ ಬಿಡುಗಡೆ ಮಾಡಿದೆ.

ಓದಲಾಗಿದೆ (11) ರಂತೆ ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಬಾಗಲಕೋಟೆ ಜಿಲ್ಲಾ ಪಂಚಾಯತಿಗೆ ಎರಡನೇ ಕಂತಿನ ಅನುದಾನವಾಗಿ ರೂ. 14,55,000 ಗಳನ್ನು ಸಂದಾಯ ಮಾಡಿದ್ದು, ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 4,85,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ : 25–3–2011**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ ಎರಡನೇ ಕಂತಿನ ಅನುದಾನ ರೂ. 4,85,000 ಗಳನ್ನು (ರೂ. ನಾಲ್ಕು ಲಕ್ಷದ ಎಂಬತ್ತೈದು ಸಾವಿರ ಮಾತ್ರ) ಬಾಗಲಕೋಟೆ ಜಿಲ್ಲಾ ಪಂಚಾಯತಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | ಬಾಗಲಕೋಟೆ | 461 | 2900ಜಜ0001 | 14,55,000 | 4,85,000 |

ಷರತ್ತುಗಳು :

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2010–2011 (2515–00–196–6–06)" (ಲಿಂಕ್ ಕೋಡ್ 2515–00–101–0–19) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ : ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ : 26–4–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1 ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಬಾಗಲಕೋಟೆ ಜಿಲ್ಲಾ ಪಂಚಾಯತಿ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5 ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಬಾಗಲಕೋಟೆ ಜಿಲ್ಲಾ ಪಂಚಾಯತಿ ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ : ಗ್ರಾಅಪ 39 ಪಿಬಿಎಸ್ 2011, ದಿನಾಂಕ : 23–3–2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವಉಕಾ), ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 994

## HORTICULTURE SECRETARIAT

**Sub:** "Scheme for Integrated Farming in Coconut for Productivity/ Improvement with Coconut Development Board Assistance (100% CDB)"-Release of funds for the component of Establishment of Neera demonstration unit at Horticulture Farm, Tumbe, Dakshina Kannada district-reg.

**Read :** 1. GO No. ತೋಇ 74 ತೋಯೋಕಾ 2010, dated : 12-5-2010
2. Letter of Director of Horticulture No. . ತೋಇ/ತೋಬೆ/ಸತೋಅ/2 /8/2010-11, dated : 16-3-2011.

**PREAMBLE :**

Sanction has been accorded to the Director of Horticulture to implement a new component during 2010-11 namely, "Establishment of Neera demonstration unit at Horticulture Farm, Tumbe, Dakshina Kannada district" under the "Scheme for Integrated Farming in Coconut for Productivity/Improvement in the State" under the Head of Account 2401-00-108-2-35-100 (Financial Assistance/Relief), as per Government Order read at (1) above. The total cost of the project will be Rs. 77.35 lakhs out of which Rs. 15.04 lakhs has been Coconut Development Board share and Rs. 62.31 lakhs has been the State share.

2. The Director of Horticulture vide in his letter read at (2) above has requested the Government to release an amount Rs. 62.31 lakhs towards the State share for the project.

3. This has been examined and hence this Order :

**GOVERNMENT ORDER NO. HCD 51 HPP 2010, BANGALORE, DATED : 28-3-2011**

Government is pleased to release an amount of Rs. 62.00 lakhs (Rupees Sixty Two Lakhs only) as State share to the Director of Horticulture under the "Scheme for Integrated Farming in Coconut for Productivity/Improvement in the State" under the Head of Account 2401-00-108-2-35-100 (Financial Assistant/Relief) for the purpose of "Establishment of Neera demonstration unit at Horticulture Farm, Tumbe, Dakshina Kannada district".

2. The Director of Horticulture is permitted to deposit the said amount by Grant-in-Aid bill to Karnataka State Horticulture Development Agency for utilization along with Coconut Development Board share as and when released.

3. The expenditure should be incurred in accordance with the scheme as approved technically in consultation with CFTRI.

4. The Director of Horticulture must actively pursue with Government of India to get 50% of the actual project cost from Government of India.

5. This order is issued with the concurrence of Finance Department vide Note No. FD 34 Exp.4 2011, dated : 26-3-2011.

By Order and in the name of the Governor of Karnataka
**B.C. Prakash**
Under Secretary to Government,
Horticulture Department.

P.R. 995

## INFRASTRUCTURE DEVELOPMENT SECRETARIAT

**Sub:** Development Tadadi Sea Port-release of funds regarding.

**Read :** 1. Letter No. DGM (IPD)/TP/2796/2010-11, dated 21-2-2011 from The Deputy General Manager, KSIIDC, Bangalore.

**PREAMBLE :**

In the above read letter, The Deputy General Manager, KSIIDC, has sent a proposal for release of funds for the following expenditure incurred/committed towards consultancy services engaged by the corporation with regard to development of Sea Port at Tadadi.

| Sl.No. | Details | Amount (Rs. In Lakhs) |
|---|---|---|
| 1 | Technical Consultants | 292.63 |
| 2 | Consultants for Environment Impact Study | 82.73 |
| 3 | Amount payable to Secretarial Consultant | 0.50 |

Expenditure incurred/to be incurred for the current year 2010-11 towards Administrative & Establishment expenses is :

| Sl.No. | Details | Amount (Rs. In Lakhs) |
|---|---|---|
| 1 | Advertisement | 20.00 |
| 2 | Formation of SPV | 5.50 |
| 3 | Establishment Expenses | 155.19 |
| 4 | Administrative Expenses | 23.40 |
| | Total | 204.09 |

The proposal has been examined and hence the following order.

**GOVERNMENT ORDER NO. IDD 30 DIA 2011, BANGALORE, DATED : 25-3-2011**

After careful consideration of the above proposal, sanction of the Government is hereby accorded for the release of Rs. 1.00 crore (Rupees One crore only) to KSIIDC under the Head of Account 5465-01-190-1-15-Karnataka Infrastructure Project Development Fund (KIPDF)-132 Capital Expenses (Plan) towards the Tadri Port related expenditure incurred by KSIIDC.

The Managing Director, KSIIDC is authorized draw the above amount on a payee's receipt duly countersigned by the Under Secretary to Government, Infrastructure Development Department.

This Order is issued in accordance with FDs Endorsement vide Note No. : FD 333 Exp-1/11 dated : 23-3-2011.

By Order and in the name of the Governor of Karnataka

**K.S. VENU GOPAL**

Under Secretary to Government, (I/c)

Infrastructure Development Department.

P.R. 996

## INFRASTRUCTURE DEVELOPMENT SECRETARIAT

**Sub:** Release of funds to the High Speed Rail Link Project (HSRL).

**Read :**
1. G.O. No. IDD 40 DIA 2002, dated 26-12-2007.
2. G.O. No. IDD 157 DIA 2007, dated 16-1-2008.
3. G.O. No. IDD 40 DIA 2002, dated 28-2-2009.
4. G.O. No. IDD 154 DIA 2007, dated 4-3-2009.
5. G.O. No. IDD 36 DIA 2009, dated 29-8-2010.
6. G.O. No. IDD 154 DIA 2007, dated 24-7-2010.
7. G.O. No. IDD 36 DIA 2009, dated 4-3-2011.
8. G.O. No. FD 420 BRS 2010, dated 23-3-2011.

**PREAMBLE :**

In the G.O. dated 26-12-2007 read at Sl.No. (1) above, sanction of the Government accorded for the implementation of HSRL to Bangalore International Airport on Public Private Partnership (PPP) basis and appointing KSIIDC as Nodal Agency for the project and also authorizing KSIIDC to engage the services of Delhi Metro Rail Corporation (DMRC) as project consultant to assist the Special Purpose Vehicle (SPV) for implementation of the project KSIIDC has floated an SPV in the name of "Bangalore Airport Rail Link Limited" (BARL) for implementing the project.

2. In G.O. read at Sl.No. (2) above, sanction was accorded for release of an amount of Rs. 2.50 crores to KSIIDC towards payment of consultancy fee to assist SPV and also for SPV imcorporation and document charges etc.

3. In G.O. dated 28-2-2009 read at Sl.No. (3) above sanction of the Government was accorded to pursue with the project of High Speed Rail Link with alignment from M.G. Road (Parade Ground-CAT) to Bangalore International Airport, with a revised cost and extending the BBMP area to cover BIA area.

4. In G.O. read at Sl. No. (4) & (5) above, sanction was accorded for release of Rs. 2.00 crores to KSIIDC for making payments to different agencies towards expenditure incurred for HSRL project and amount of Rs. 570 lakhs was released to BARL towards HSRL project as equity during 2009-10.

6. In. G.O. read at Sl.No. (6) above, the fair structure to be adopted at the time of commencing the operations of the airport rail link has been determined.

7. In G.O. read at Sl.No. (7) above, an amount of Rs. 570.00 lakhs was released to BARL towards land acquisition for HSRL project during 2010-11.

8. Director (Projects) BARL in his proposal had requested for release of Rs. 50.00 crores towards land acquisition and other expenditure. Since the amount of Rs. 570.00 lakhs provided under the Head of Account **"5465-01-190-3-06-211(P) Rail Link to New Airport"** towards land acquisition for HSRL project during 2010-11 having been exhausted. Finance Department has accorded sanction for re-appropriation of a sum of Rs. 1000.00 lakhs vide G.O. read at Sl.No. (8) above.

9. The proposal has been examined by the Government and hence the following order.

**GOVERNMENT ORDER NO. IDD 36 DIA 2009, BANGALORE, DATED : 25-3-2011**

After careful consideration of the above proposal Government hereby accords sanction for release of Rs. 1000.00 lakhs (Rupees One Thousand Lakhs) only to BARL under the Head of Account "5465-01-190-3-06-211(P) Rail Link to New Airport" towards land acquisition and other expenditure for HSRL project during 2010-11.

2) The Director (projects), BARL is authorized to draw the above amount on a payees receipt duly countersigned by the Under Secretary to Government, Infrastructure Development Department.

3) This order issues with the concurrence of FD, vide endorsement No. FD 467 Exp-1/2011 dated 23-3-2011 and G.O. No. FD 420 BRS 2010 dated 23-3-2011.

By Order and in the name of the Governor of Karnataka

**K.S. Venugopal**

P.R. 997

Under Secretary to Government, (I/c)
Infrastructure Development Department.

## INFRASTRUCTURE DEVELOPMENT SECRETARIAT

**Sub:** Fees to iDeCK for Project Management Services for the construction of Shimoga Airport.

**Read :**
1. Government letter No. IDD 72 DIA 2008, dated 9-7-2009.
2. Letter No. iDeCK/2009-10/733, dated 5-8-09.
3. G.O. No. IDD 86 DIA 08, dated 12-8-2009.
4. Letter No. iDeCK/IDD/2010-11/231B, dated 14-3-2011.

**PREAMBLE :**

In Government letter read at Sl.No. (1) above iDeCK has been appointed as consultant to oversee the project implementation including verification of the physical/financial progress of the Shimoga Airport Development Project on a monthly basis and generate periodical reports and submit to the Infrastruture Development Department for monitoring the progress.

2. Accordingly iDeCK has sent a proposal for carrying out project management services for the Shimoga Airport Development project, vide their letter dated 5-8-09 read at Sl.No. (2) above. In the above said proposal iDeCK has offered the scope of services and the terms of payment for the fees and a fee of Rs. 3,00,000/- per month was claimed by iDeCK for the assignment exclusive of applicable service taxes.

3. In G.O. dated 12-8-2009 read at (3) above, approval for scope of services and sanction for payment of fees to iDeCK for project management services for Shimoga Airport Development project at the rate not exceeding of Rs. 3,00,000/- exclusive of applicable service taxes per month for the project period of twelve months has given.

4. iDeCK in their letter read at (4) above, has sent Invoice for Rs. 7,72,100/- towards project management fees of Quality control Engineer and Project Manager for the month of August 2010, Septmber 2010, January 2011 and February 2011.

5. Government have considered the above proposal and hence this order.

**GOVERNMENT ORDER NO. IDD 86 DIA 2008, BANGALORE, DATED : 21-3-2011**

After careful examination of the proposal, Government hereby accords approval for the project management fees to Quality control Engineer and Project Manager for the captioned project and sanction for payment of fees to iDeCK for project management services for Shimoga Airport Development Project at the rate not exceeding of Rs. 7,72,100/-.

2. This amount shall be released under the Head of A/c 3451-00-090-1-06-059-Infrastructure Preliminary studies Other Expenditure out of the provision of 797.00 lakhs during 2010-11.

3. The Chief Financial Officer, iDeCK is authorized to draw the above amount on a payees receipt duly countersigned by the Under Secretary to Government, Infrastructure Development Department, Bangalore.

4. This order issues in accordance with the financial powers delegated to Principal Secretaries/Secretaries vide G.O. No. FD 1 TFP 2008, dated 16-5-2008.

By Order and in the name of the Governor of Karnataka

**C.A. Baburavindranath Patel**

P.R. 998

Under Secretary to Government,
Infrastructure Development Department.

## ಇಂಧನ ಸಚಿವಾಲಯ

**ವಿಷಯ :** ಹುಕ್ಕೇರಿ ತಾಲ್ಲೂಕಿನಲ್ಲಿ "ನಿರಂತರ ಜ್ಯೋತಿ" ಯೋಜನೆಯ ಅನುಷ್ಠಾನಕ್ಕೆ ಕರ್ನಾಟಕ ಸರ್ಕಾರದಿಂದ ಧನ ಸಹಾಯ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 166 ಇಎಂಸಿ 2010, ಬೆಂಗಳೂರು, ದಿನಾಂಕ : 20-10-2010.
2. ಮಾನ್ಯ ಮುಖ್ಯ ಮಂತ್ರಿಯವರ ಟಿಪ್ಪಣಿ ಸಂಖ್ಯೆ : PSCM/853/2010, ದಿನಾಂಕ : 18-3-2010
3. ವ್ಯವಸ್ಥಾಪಕ ನಿರ್ದೇಶಕರು, ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರಿ ಸಂಘ ನಿಯಮಿತ, ಇವರ ಪತ್ರ ಸಂಖ್ಯೆ : ಸ್ಥಾ/ಅ/2010-11.
4. ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ : FD 253 Exp-1/2011, ದಿನಾಂಕ : 15-3-2011.

ಪ್ರಸ್ತಾವನೆ :

ಕರ್ನಾಟಕ ಸರ್ಕಾರ 2010-11ನೇ ವರ್ಷದ ಆಯವ್ಯಯ ಭಾಷಣದಲ್ಲಿ "ನಿರಂತರ ಜ್ಯೋತಿ" ಯೋಜನೆಯನ್ನು ಒಟ್ಟು 126 ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸುವುದೆಂದು ತಿಳಿಸಿದೆ. "ನಿರಂತರ ಜ್ಯೋತಿ" ಯೋಜನೆಯನ್ನು ಎರಡು ಹಂತಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದು ಮೊದಲನೇ ಹಂತದಲ್ಲಿ 70 ತಾಲ್ಲೂಕಿಗಳು ಒಳಗೊಂಡಿದ್ದು, ಎರಡನೇ ಹಂತದಲ್ಲಿ 56 ತಾಲ್ಲೂಕುಗಳು ಒಳಗೊಂಡಿರುತ್ತದೆ.

ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ (ಬೆವಿಕಂ), ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ (ಚಾವಿಸನಿನಿ), ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ (ಗುವಿಕಂ) ಮತ್ತು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ (ಹುವಿಕಂ) ವ್ಯಾಪ್ತಿ ಪ್ರದೇಶಗಳಲ್ಲಿ ಮೊದಲನೇ ಹಂತದಲ್ಲಿ ರೂ. 1203 ಕೋಟಿಗಳಷ್ಟು ಮತ್ತು 2ನೇ ಹಂತದಲ್ಲಿ ರೂ. 920 ಕೋಟಿಗಳಷ್ಟು, ಒಟ್ಟು ರೂ. 2123 ಕೋಟಿ ಕಾಮಗಾರಿ ಅಂದಾಜು ವೆಚ್ಚದಷ್ಟು ನಿರಂತರ ಜ್ಯೋತಿ ಯೋಜನೆಯನ್ನು ಅನುಷ್ಠಾನಗೊಳಿಸಲು, ಯೋಜನೆಯ ಶೇಕಡಾ 40 ರಷ್ಟು ವೆಚ್ಚವನ್ನು ಸರ್ಕಾರದಿಂದ ಈ ನಾಲ್ಕು ವಿದ್ಯುತ್ ಸರಬರಾಜು ಕಂಪನಿಗಳಿಗೆ ಇಕ್ವಿಟಿ ಹಣ ಒದಗಿಸುವುದಕ್ಕೆ ಮೇಲೆ ಓದಲಾದ-1 ರ ಸರ್ಕಾರಿ ಆದೇಶದಲ್ಲಿ ತಿಳಿಸಿರುವ ನಿಬಂಧನೆಗಳಿಗೆ ಒಳಪಟ್ಟು, ಅನುಮೋದನೆ ನೀಡಲಾಗಿರುತ್ತದೆ. ಯೋಜನೆಯ ಉಳಿದ ಶೇಕಡ 60 ರಷ್ಟು ವೆಚ್ಚವನ್ನು ವಿದ್ಯುತ್ ಸರಬರಾಜು ಕಂಪನಿಗಳು ತಮ್ಮ ಸಂಪನ್ಮೂಲ/ಸಾಲ ಪಡೆದು ಭರಿಸುವುದು.

ಮೇಲೆ ಓದಲಾದ-2 ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಗಳು ನಿರಂತರ ಜ್ಯೋತಿ ಯೋಜನೆಯಡಿಯಲ್ಲಿ ಹುಕ್ಕೇರಿ ತಾಲ್ಲೂಕನ್ನು ಸೇರಿಸಿ ಕಾಮಗಾರಿ ಪ್ರಾರಂಭಿಸಲು ಸೂಚಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರಿ ಸಂಘ, ನಿಯಮಿತ ಇವರು ಮೇಲೆ ಓದಲಾದ-3ರ ಪತ್ರದ ಮೂಲಕ ಹುಕ್ಕೇರಿ ತಾಲ್ಲೂಕಿನಲ್ಲಿ ನಿರಂತರ ಜ್ಯೋತಿ ಯೋಜನೆಯನ್ನು ಅನುಷ್ಠಾನಗೊಳಿಸಲು ರೂ. 17.95 ಕೋಟಿ ವೆಚ್ಚದ ವಿಸ್ತೃತ ಪರಿಯೋಜನೆ ವರದಿಯನ್ನು ಸಲ್ಲಿಸಿದ್ದು, ಗ್ರಾಮೀಣ ವಿದ್ಯುತ್ ನಿರ್ವಹಣೆ ವ್ಯವಸ್ಥೆಯ ತೊಂದರೆ, ಗ್ರಾಹಕರಿಗೆ ದೊರಕುತ್ತಿರುವ ಕಡಿಮೆ ವೋಲ್ಟೇಜ್ ಮತ್ತು ಸಾರ್ವಜನಿಕ ಹಿತದೃಷ್ಟಿಯನ್ನು ಕಾಪಾಡುವ ಗುರಿಯನ್ನು ಹೊಂದಿದ್ದು ನಿರಂತರ ಜ್ಯೋತಿ ಯೋಜನೆಯನ್ನು ಅನುಷ್ಠಾನಗೊಳಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶವನ್ನು ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 166(ಪಿ) ಇಎಂಸಿ 2010, ಬೆಂಗಳೂರು, ದಿನಾಂಕ : 29-3-2011**

(ಅ) ನಿರಂತರ ಜ್ಯೋತಿ ಯೋಜನೆಯನ್ನು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರಿ ಸಂಘ ನಿಯಮಿತದಲ್ಲಿ ರು. 17.95 ಕೋಟಿ ವೆಚ್ಚದಲ್ಲಿ ಅನುಷ್ಠಾನಗೊಳಿಸಲು.

(ಆ) ಯೋಜನೆಯ ಶೇ. 40 ರಷ್ಟು ವೆಚ್ಚವನ್ನು ಸರ್ಕಾರ ಇಕ್ವಿಟಿಯಾಗಿ (Equity) ಒದಗಿಸುವುದು ಮತ್ತು ಉಳಿದ ಶೇಕಡ 60 ರಷ್ಟು ಯೋಜನೆಯ ವೆಚ್ಚವನ್ನು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರಿ ಸಂಘ ನಿಯಮಿತವು ತಮ್ಮ ಸಂಪನ್ಮೂಲ/ಸಾಲದ ರೂಪದಲ್ಲಿ ಭರಿಸಲು ಸರ್ಕಾರದ ಅನುಮೋದನೆಯನ್ನು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ನೀಡಲಾಗಿದೆ.

1. ಈ ಯೋಜನೆಯಿಂದ ಬರುವ ಲಾಭಗಳು ಅಳೆಯುವಂತಹದಾಗಿರಬೇಕು.
2. ಈ ಯೋಜನೆ ಅನುಷ್ಠಾನದಿಂದ ಸಾಧಿಸಬೇಕಾದ ಮುಖ್ಯ ಗುರಿಗಳು ವಿದ್ಯುತ್ ಲೆಕ್ಕಾಚಾರದಲ್ಲಿ ಅಭಿವೃದ್ಧಿ, ವ್ಯವಸಾಯೇತರ ವಿದ್ಯುತ್ ಸರಬರಾಜಿನಲ್ಲಿ ಅಭಿವೃದ್ಧಿ ಮತ್ತು ವಿತರಣಾ ವ್ಯವಸ್ಥೆಯಲ್ಲಿ ನಷ್ಟಗಳ ಇಳಿಕೆ.
3. ಯೋಜನೆಯ ವೆಚ್ಚ ಮತ್ತು ಕಾಲಮಿತಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 1442 EXP-1/2010, ದಿನಾಂಕ : 14-9-2010. ಹಾಗೂ FD 253 Exp-1/2011, ದಿನಾಂಕ 15-3-2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್. 999

## ಇಂಧನ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ನಿರಂತರ ಜ್ಯೋತಿ ಕಾಮಗಾರಿಗಳ ಸಲುವಾಗಿ ವಿಸಕಂಗಳಿಗೆ Equity ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 166 ಇಎಂಸಿ 2010, ದಿನಾಂಕ : 20–10–2010.

2. ಬೆವಿಕಂ ಪತ್ರ ಸಂಖ್ಯೆ : ಮುಪ್ರವ್ಯ (ವಿ)/ಪ್ರಾಜೆಕ್ಟ್/ಪ್ರವ್ಯ (ನಿ.ಜ್ಯೋತಿ)/ಉಪ್ರವ್ಯ–2/ಸಪ್ರವ್ಯ–1/ 10–11/4594–95, ದಿನಾಂಕ : 4–11–2010.

3. ಸರ್ಕಾರಿ ಆದೇಶ ಸಂಖ್ಯೆ : EN13 PSR 2010, dated : 22-12-2010

ಪ್ರಸ್ತಾವನೆ :

1. 2010–11ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ–37 ರಲ್ಲಿ ರಾಜ್ಯದ 126 ತಾಲ್ಲೂಕುಗಳಲ್ಲಿ ನಿರಂತರ ಜ್ಯೋತಿ ಯೋಜನೆಯನ್ನು ಎರಡು ವರ್ಷಗಳ ಅವಧಿಯಲ್ಲಿ ಜಾರಿ ಮಾಡಲಾಗುವುದು. 2010–11 ರಲ್ಲಿ 70 ತಾಲ್ಲೂಕುಗಳಲ್ಲಿ ಈ ಯೋಜನೆಯನ್ನು ರೂ. 1200 ಕೋಟಿ ವೆಚ್ಚದಲ್ಲಿ ಜಾರಿ ಮಾಡಲು ವಿದ್ಯುತ್ ವಿತರಣ ಕಂಪನಿಗಳಿಗೆ ಅಗತ್ಯವಿರುವ ಬಂಡವಾಳದ ನೆರವನ್ನು ನೀಡಲಾಗುವುದೆಂದು ನಮೂದಿಸಲಾಗಿರುತ್ತದೆ.

2. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ (ಬೆವಿಕಂ), ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಿ (ಚಾವಿಸನಿನಿ), ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ (ಗುವಿಕಂ) ಮತ್ತು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ (ಹುವಿಕಂ) ವ್ಯಾಪ್ತಿ ಪ್ರದೇಶಗಳಲ್ಲಿ ಮೊದಲನೇ ಹಂತದಲ್ಲಿ ರೂ. 1203 ಕೋಟಿಗಳಷ್ಟು ಮತ್ತು 2ನೇ ಹಂತದಲ್ಲಿ ರೂ. 920 ಕೋಟಿಗಳಷ್ಟು, ಒಟ್ಟು ರೂ. 2123 ಕೋಟಿ ಕಾಮಗಾರಿ ಅಂದಾಜು ವೆಚ್ಚದಷ್ಟು ನಿರಂತರ ಜ್ಯೋತಿ ಯೋಜನೆಯನ್ನು ಅನುಷ್ಠಾನಗೊಳಿಸಲು, ಯೋಜನೆಯ ಶೇಕಡ 40 ರಷ್ಟು ವೆಚ್ಚವನ್ನು ಸರ್ಕಾರದಿಂದ ಈ ನಾಲ್ಕು ವಿದ್ಯುತ್ ಸರಬರಾಜು ಕಂಪನಿಗಳಿಗೆ ಈಕ್ವಿಟಿ ಹಣ ಒದಗಿಸುವುದಕ್ಕೆ ಮೇಲೆ ಕ್ರಮಾಂಕ–1 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ತಿಳಿಸಿರುವ ನಿಬಂಧನೆಗಳಿಗೆ ಒಳಪಟ್ಟು, ಅನುಮೋದನೆ ನೀಡಲಾಗಿರುತ್ತದೆ. ಯೋಜನೆಯ ಉಳಿದ ಶೇಕಡ 60 ರಷ್ಟು ವೆಚ್ಚವನ್ನು ವಿದ್ಯುತ್ ಸರಬರಾಜು ಕಂಪನಿಗಳು ತಮ್ಮ ಸಂಪನ್ಮೂಲ/ಸಾಲ ಪಡೆದು ಭರಿಸುವುದು.

3. ಮೇಲೆ ಕ್ರಮಾಂಕ–2 ರಲ್ಲಿ ಓದಲಾದ ಪತ್ರದಲ್ಲಿ, ಬೆವಿಕಂ ಈ ಕೆಳಕಂಡ ವಿವರಗಳನ್ನು ನೀಡಿ ನಿರಂತರ ಜ್ಯೋತಿ ಯೋಜನೆಯ ಮೊದಲನೆ ಹಂತದ ಕಾಮಗಾರಿಗಳಿಗೆ Equity ಹಣ 376.20 ಕೋಟಿ ರೂ. ಬಿಡುಗಡೆ ಮಾಡಲು ಕೋರಿರುವ ಪ್ರಸ್ತಾವನೆ ಬಗ್ಗೆ, ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ : PD 4 SCA 2010, ದಿನಾಂಕ : 1–12–2010 ರಲ್ಲಿ ನಿರಂತರ ಜ್ಯೋತಿ ಮೊದಲನೇ ಹಂತದ ಕಾಮಗಾರಿಗಳಿಗೆ ಶೇಕಡಾ 40 ರಷ್ಟು ಈಕ್ವಿಟಿ ಹಣವಾದ 376.20 ಕೋಟಿ ರೂ. ಗಳನ್ನು 2010–11 ರ ಎರಡನೇ ಪೂರಕ ಅಂದಾಜುಗಳಲ್ಲಿ ಆರ್ಥಿಕ ಇಲಾಖೆಯು ಬಿಡುಗಡೆ ಮಾಡಲು ಸಹಮತ ನೀಡಿರುತ್ತದೆ.

(ಮೊಬಲಗು ಕೋಟಿ. ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಕಂಪನಿಯ ಹೆಸರು | ತಾಲ್ಲೂಕುಗಳು ಸಂಖ್ಯೆ | ಫೀಡರ್‌ಗಳ ಸಂಖ್ಯೆ | ತಗಲುವ ವೆಚ್ಚ | ಈಕ್ವಿಟಿ (ಶೇ. 40) | 2009–10ನೇ ಸಾಲಿನಲ್ಲಿ ಈಕ್ವಿಟಿ ಹಣ ಬಿಡುಗಡೆ ಮಾಡಿರುವುದು. |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬೆವಿಕಂ | 20 | 292 | 382.0 | 152.80 | 32 |
| 2 | ಹುವಿಕಂ | 20 | 247 | 288.0 | 115.20 | 35 |
| 3 | ಗುವಿಕಂ | 20 | 227 | 287.0 | 114.80 | 30 |
| 4 | ಚಾವಿಸನಿನಿ | 10 | 161 | 246.0 | 98.40 | 8 |
| | ಒಟ್ಟು | 70 | 927 | 1203.0 | 481.20 | 105 |

4. 2010–11ರ ಆಯವ್ಯಯ ಅಂದಾಜುಗಳಲ್ಲಿ "4801–01–190–0–09–211 Investment in Power Utilities (ಯೋಜನೆ)" ಲೆಕ್ಕ ಶೀರ್ಷಿಕೆಯಡಿ 500 ಕೋಟಿ ರೂ.ಗಳ ಅವಕಾಶ ಒದಗಿಸಲಾಗಿರುತ್ತದೆ. ಸದರಿ ಲೆಕ್ಕಶೀರ್ಷಿಕೆಯಡಿ 2010–11ನೇ ಸಾಲಿಗೆ ಪೂರಕ ಅಂದಾಜು–2 ರಲ್ಲಿ 500 ಕೋಟಿ ರೂ. ಮತ್ತು ಪೂರಕ ಅಂದಾಜು–3 ರಲ್ಲಿ 500 ಕೋಟಿ ರೂ. ಒದಗಿಸಲಾಗಿರುತ್ತದೆ.

5. ಮೇಲೆ ಕ್ರಮಾಂಕ–3 ರಲ್ಲಿ ಸರ್ಕಾರಿ ಆದೇಶ ಸಂಖ್ಯೆಯಲ್ಲಿ 100 ಕೋಟಿ ರೂ. (25 ಕೋಟಿ ಪ್ರತಿ ಎಸ್ಕಾಂ) ಗಳಿಗೆ ಬಿಡುಗಡೆ ಮಾಡಲಾಗಿರುತ್ತದೆ.

6. ವಿದ್ಯುತ್ ಸರಬರಾಜು ಕಂಪನಿಯ ಮೇಲ್ಕಂಡ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, ನಿರಂತರ ಜ್ಯೋತಿ ಯೋಜನಾ ಕಾಮಗಾರಿಗಳಿಗೆ Equity ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 13 ಪಿಎಸ್‌ಆರ್ 2010, ಬೆಂಗಳೂರು, ದಿನಾಂಕ : 30–3–2011**

1. ಸರ್ಕಾರವು, ಮೇಲೆ ವಿವರಿಸಲಾದ ಸನ್ನಿವೇಶಗಳಲ್ಲಿ, ವಿದ್ಯುತ್ ಸರಬರಾಜು ಕಂಪನಿಗಳು 2010–11ನೇ ಸಾಲಿನಲ್ಲಿ ಕೈಗೊಳ್ಳುವ ನಿರಂತರ ಜ್ಯೋತಿ ಯೋಜನೆಯ ಮೊದಲನೇ ಹಂತದ ಕಾಮಗಾರಿಗಳ ಯೋಜನೆ ವೆಚ್ಚದ ಶೇ 40 ರಷ್ಟು ಮೊಬಲಗು ಭಾಗದ ಸಲುವಾಗಿ "4801–01–190–0–09–211 Investment in Power Utilities (ಯೋಜನೆ)" ಲೆಕ್ಕ ಶೀರ್ಷಿಕೆಯಡಿ 174.32 ಕೋಟಿ ರೂ. ಗಳನ್ನು (ಒಂದು ನೂರ ಎಪ್ಪತ್ತಾನಾಲ್ಕು ಕೋಟಿ ಮೂವತ್ತೆರಡು ಲಕ್ಷ ರೂ. ಗಳು ಮಾತ್ರ) ಕವಿಪ್ರನಿನಿಗೆ ಬಿಡುಗಡೆ ಮಾಡಿದೆ.

2. ಕವಿಪ್ರನಿನಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ ರವರ ಮೇಲು ರುಜುವನ್ನು payee's receipt ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಸದರಿ ಹಣವನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಗೆ ನಮೂದಿಸಿರುವ ಪ್ರಕಾರ ನಗದು ಸಂಪೂರ್ಣವಾಗಿ ಹಣ ಪಡೆದ 2 ದಿನದೊಳಗೆ ಪಾವತಿಸತಕ್ಕದ್ದು ಹಾಗೂ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

| ಕ್ರಮ ಸಂಖ್ಯೆ | ಕಂಪನಿಗಳ ಹೆಸರು | Equity ರೂಪದಲ್ಲಿ ಬಿಡುಗಡೆ ಮಾಡಿದ ಹಣ (ಕೋಟಿ ರೂ. ಗಳಲ್ಲಿ) |
|---|---|---|
| 1 | 2 | 3 |
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 63.45 |
| 2 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 30.81 |
| 3 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 35.49 |
| 4 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ | 44.57 |
| | ಮೊತ್ತ | 174.32 |

4. ಬಿಡುಗಡೆ ಮಾಡಿದ Equity ಹಣ 174.32 ಕೋಟಿ ರೂ. ಈ ಕೆಳಕಂಡ ಷರತ್ತಿಗೊಳಪಟ್ಟಿರುತ್ತದೆ.

(ಅ) ವಿಸಕಂಗಳು ಸರ್ಕಾರಿ ಆದೇಶ ಸಂಖ್ಯೆ : ಇಎನ್ 166 ಇಎಮ್‌ಸಿ 2010, ದಿನಾಂಕ : 20–10–2010 ರಲ್ಲಿ ನಿಗದಿಪಡಿಸಿರುವ ಎಲ್ಲಾ ನಿಬಂಧನೆಗಳನ್ನು ಪಾಲಿಸತಕ್ಕದ್ದು.

(ಆ) ESCOMs to ensure that the funds released for Niranthara Jyothi are earmarked only for the works undertaken for Niranthara Jyothi programme and should put this money in a Separate Bank Account which should be escrowed only for the works under the Niranthara Jyothi scheme.

(ಇ) ESCOMs shall prepare segmental accounts to ensure that the investments done by Government and the works undertaken for Niranthara Jyothi scheme are clearly segregated and can be easily identified and reported.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 487 Exp-1/2010, ದಿನಾಂಕ : 29–3–2011 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್. 1000

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಬಿ.ಟಿ. ರಾಜಣ್ಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇವರ ವಿರುದ್ಧ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ :**
1. ದಿನಾಂಕ 29–08–07 ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 018 ಎಸ್‌ಇಎನ್ 03.
2. ದಿನಾಂಕ 03–01–08 ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 034 ಕೆಇವಿ 07.
3. ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ಸಂಖ್ಯೆ : ಸಿಸಿಎ/ಮಿಸ್/70/07–08, ದಿನಾಂಕ 21–10–09.
4. ದಿನಾಂಕ : 29–12–09ರ 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ ಸಿಆಸುಇ 034 ಕೆಇವಿ 07.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಆದೇಶದಲ್ಲಿ ಶ್ರೀ ಬಿ.ಟಿ. ರಾಜಣ್ಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಇವರು ಈ ಹಿಂದೆ ವಿಶೇಷ ಭೂ ಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ತುಂಗಾ ಮೇಲ್ದಂಡೆ ಯೋಜನೆಯಡಿ ಮುಖ್ಯ ನಾಲಾ ನಿರ್ಮಿಸಲು ಭೂ ಸ್ವಾಧೀನಪಡಿಸಿಕೊಳ್ಳಲಾದ ಜಮೀನಿನ ಪೈಕಿ ಶಿವಮೊಗ್ಗ ತಾಲ್ಲೂಕು ಬೆಳಲಕಟ್ಟೆ ಗ್ರಾಮದ ಸರ್ವೆ ನಂ. 78 ರಲ್ಲಿನ 0.20 ಎಕರೆ ಜಮೀನು ವಾಸ್ತವವಾಗಿ ಬಳಕೆಯಾಗಿದ್ದರೂ ಸಹ ಅನಾವಶ್ಯಕವಾಗಿ 0.23 ಎಕರೆ ಜಮೀನನ್ನು ಹೆಚ್ಚುವರಿಯಾಗಿ ಸ್ವಾಧೀನವಾಗಲು ಕಾರಣಕರ್ತರಾಗಿರುತ್ತಾರೆ. ಈ ಸರ್ವೆ ನಂಬರಿನ ಒಟ್ಟು 01–03 ಎಕರೆ ಜಮೀನು ಕರ್ನಾಟಕ ಭೂ ಸ್ವಾಧೀನ ಕಾಯ್ದೆ ಕಲಂ 4(1) ಮತ್ತು ಕಲಂ 6(1) ರ ಅಧಿಸೂಚನೆಯಲ್ಲಿ ಸೇರಿದ್ದು, ಇವರು ದಿನಾಂಕ 16–05–02 ರಂದು ಸ್ಥಳ ತನಿಖೆ ನಡೆಸಿ, ನಾಲಾ ಪಂಕ್ತೀಕರಣಕ್ಕಾಗಿ ಉಪಯೋಗವಾಗಿರುವ ಜಮೀನನ್ನು ಅಳತೆ ಮಾಡಿ ವರದಿ ಸಲ್ಲಿಸುವಂತೆ ಸಂಬಂಧಿಸಿದ ಭೂ ಮಾಪಕರಿಗೆ ಸೂಚಿಸಿರುತ್ತಾರೆ. ಒಟ್ಟು ಜಮೀನಿನ ವಿಸ್ತೀರ್ಣ 01–03 ಎಕರೆ ಪೈಕಿ ವಾಸ್ತವವಾಗಿ 0.20 ಎಕರೆ ಮಾತ್ರ ನಾಲಾ ಪಂಕ್ತೀಕರಣಕ್ಕೆ ಉಪಯೋಗವಾಗಿದ್ದು, ಉಳಿಕೆ 0.23 ಎಕರೆ ಜಮೀನು ನಾಲಾ ಪಂಕ್ತೀಕರಣಕ್ಕೆ ಉಪಯೋಗಿಸಲ್ಪಟ್ಟಿರುವುದಿಲ್ಲವೆಂದು ಭೂ ಮಾಪಕರು ದಿನಾಂಕ 23–06–02 ರಂದು ವರದಿ ನೀಡಿರುತ್ತಾರೆ. ಅದರಂತೆ, 0–20 ಎಕರೆ ಜಮೀನಿಗೆ ಮಾತ್ರ ಭೂ ಸ್ವಾಧೀನ ಪ್ರಕ್ರಿಯೆಯಂತೆ ಸಕ್ರಮಗೊಳಿಸುವ ಕ್ರಮ ಜರುಗಿಸುವ ಬದಲು ಸದರಿ ಜಮೀನಿನ ಖಾತೆದಾರರಾದ

ಶ್ರೀ ಈ. ಷಣ್ಮುಖಪ್ಪ ಬಿನ್ ಈಶ್ವರಪ್ಪ ರವರೊಂದಿಗೆ ಷಾಮೀಲಾಗಿ ನಾಲಾ ಪಂಕ್ತೀಕರಣದಲ್ಲಿ ಉಪಯೋಗಗೊಳ್ಳದಿದ್ದ 0–23 ಎಕರೆ ಜಮೀನಿನ ಸ್ವಾಧೀನ ಪ್ರಕ್ರಿಯೆಯ ಬಗ್ಗೆ ಸಾಕಷ್ಟು ಮುಂಚಿತವಾಗಿ ತಿಳಿದಿದ್ದರೂ ಸಹ ಇದನ್ನು ಮೇಲಧಿಕಾರಿಗಳ ಗಮನಕ್ಕೆ ತಾರದೆ, ಶ್ರೀ ರಾಜಣ್ಣ ರವರು ನಾಲಾ ಪಂಕ್ತೀಕರಣಕ್ಕೆ ಉಪಯೋಗಕ್ಕೆ ಒಳಪಡದಿದ್ದ 0.23 ಎಕರೆ ಜಮೀನು ಹಾಗೂ ಅದರಲ್ಲಿನ 6 ಮಾವಿನ ಮರ ಮತ್ತು 1 ಬೇವಿನ ಮರಗಳಿಗೆ ಭೂ ಸ್ವಾಧೀನ ಪರಿಹಾರ ಹಣ ಪಾವತಿಸಿ ಸರ್ಕಾರಕ್ಕೆ ಹಾಗೂ ಕರ್ನಾಟಕ ನೀರಾವರಿ ನಿಗಮ ನಿಯಮಿತದ ಬೊಕ್ಕಸಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವ ಆರೋಪದ ಸಂಬಂಧ ಸದರಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಮುಂದುವರಿಸಿ, ಅಧಿಕಾರಿಯ ವಿರುದ್ಧ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಗಳನ್ನು ವಿಚಾರಣೆ ಮೂಲಕ ತಿಳಿಯುವ ಸಲುವಾಗಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕಾರ್ಯಪಾಲಕ ಅಭಿಯಂತರರು, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ರವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ನಂತರ, ಮೇಲೆ ಓದಲಾದ ಕ್ರಮಸಂಖ್ಯೆ (2) ರಲ್ಲಿ ಕಾರ್ಯಪಾಲಕ ಅಭಿಯಂತರ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇವರ ಬದಲಿಗೆ ಕೇಂದ್ರ ಸ್ಥಾನಿಕ ಸಹಾಯಕರು ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3) ರಲ್ಲಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಹಾಗೂ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸುತ್ತಾ, ಸದರಿ ಸರ್ವೆ ನಂಬರಿನ ಒಟ್ಟು ವಿಸ್ತೀರ್ಣ 01–23 ಎಕರೆ ಜಮೀನು ಕರ್ನಾಟಕ ಭೂ ಸ್ವಾಧೀನ ಕಾಯ್ದೆ ಕಲಂ 4(1) ಮತ್ತು 6(1) ರ ಅಧಿಸೂಚನೆಯಲ್ಲಿ ಸೇರಿದ್ದರೂ ಸಹ, ಐತೀರ್ಪು ರಚಿಸುವ ಪೂರ್ವದಲ್ಲಿ ಆಪಾದಿತ ಅಧಿಕಾರಿಯು ಸ್ಥಳ ತನಿಖೆ ಕೈಗೊಂಡು, ಸಂಬಂಧಿಸಿದ ಭೂ ಮಾಪಕರ ವರದಿಯಂತೆ 0–23 ಎಕರೆ ಜಮೀನು ನಾಲಾ ಪಂಕ್ತೀಕರಣಕ್ಕೆ ಒಳಪಟ್ಟಿರುವುದಿಲ್ಲ ಎಂಬುದು ದೃಢಪಟ್ಟಿದ್ದರೂ ಸಹ, ಹಾಗೂ ಹೆಚ್ಚುವರಿ ಜಮೀನು ಸ್ವಾಧೀನತೆಯ ಅವಶ್ಯಕತೆಯ ಬಗ್ಗೆ ಭೂ ಕೋರಿಕೆ ಸಂಸ್ಥೆಗೆ ಪತ್ರ ಬರೆದಿರುವುದು ಮತ್ತು ಅವರಿಂದ ಯಾವುದೇ ಪ್ರತ್ಯುತ್ತರ ಬಾರದಿರುವುದು, ಇತ್ಯಾದಿಗಳನ್ನು ಹೆಚ್ಚುವರಿ ಅನವಶ್ಯಕ 0–23 ಎಕರೆ ಜಮೀನನ್ನು ಭೂ ಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡುವ ಕುರಿತು ಕರಡು ಐತೀರ್ಪು ಪ್ರಸ್ತಾವನೆಯೊಂದಿಗೆ ಜಿಲ್ಲಾಧಿಕಾರಿಗಳ ಗಮನಕ್ಕೆ ಸಲ್ಲಿಸುವುದಾಗಲೀ, ಅವರಿಂದ ಸಲಹೆ ಪಡೆಯುವುದಾಗಲೀ ಅಥವಾ ಕರ್ನಾಟಕ ಭೂ ಸ್ವಾಧೀನ ಕಾಯ್ದೆ ಕಲಂ 48 ರಡಿ ಪ್ರತ್ಯೇಕ ಪ್ರಸ್ತಾವನೆಯನ್ನಾಗಲೀ ಮಾಡಿರುವುದಿಲ್ಲ. ಅಲ್ಲದೆ, ಭೂ ಸ್ವಾಧೀನ ಪ್ರಕ್ರಿಯೆಯು ಅನೂರ್ಜಿತಗೊಳ್ಳಲು (vitiate) ಸಾಕಷ್ಟು ಕಾಲಾವಕಾಶ ಇರುವುದು, ಇತ್ಯಾದಿ ಎಲ್ಲ ಅಂಶಗಳು ಆಪಾದಿತ ಅಧಿಕಾರಿಗೆ ಸಾಕಷ್ಟು ಮುಂಚಿತವಾಗಿ ಗೊತ್ತಿದ್ದರೂ ಸಹ, ಇದ್ಯಾವುದನ್ನೂ, ಐತೀರ್ಪು ಪ್ರಸ್ತಾವನೆಯಲ್ಲಿ ಉಲ್ಲೇಖಿಸದಿರುವುದು, ಜಿಲ್ಲಾಧಿಕಾರಿಗಳ ಸಲಹೆ ಪಡೆಯದಿರುವುದು ಇತ್ಯಾದಿ ಅಂಶಗಳ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯ ವಿರುದ್ಧದ ಆರೋಪವು ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ.

ಸರ್ಕಾರವು ವಿಚಾರಣಾ ವರದಿಯ ಪ್ರತಿಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಆಪಾದಿತರಿಗೆ 2ನೇ ಕಾರಣ ಕೇಳುವ ನೋಟೀಸಿನ ಮೂಲಕ ಒದಗಿಸಿದ್ದು ಅದಕ್ಕೆ ಆಪಾದಿತ ಅಧಿಕಾರಿ ಶ್ರೀ ಬಿ.ಟಿ. ರಾಜಣ್ಣ ರವರು ಸಲ್ಲಿಸಿದ ಲಿಖಿತ ಅಹವಾಲು ಯಾವುದೇ ಸಮರ್ಥನೆಯಿಂದ ಕೂಡಿರುವುದಿಲ್ಲವೆಂದು ಸರ್ಕಾರವು ಪರಿಗಣಿಸುತ್ತಾ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 034 ಕೆಇವಿ 2007, ಬೆಂಗಳೂರು, ದಿನಾಂಕ 01ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಶ್ರೀ ಬಿ.ಟಿ. ರಾಜಣ್ಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇವರು ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಇಲ್ಲದಂತೆ (without cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಸೇವೆಗಳು–2)

ಪಿ.ಆರ್. 1049

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರು, ಇವರ ವಿರುದ್ಧ ಇಲಾಖಾ ವಿಚಾರಣೆ – ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ರಿಜಿಸ್ಟ್ರಾರ್ ಜನರಲ್, ಉಚ್ಚ ನ್ಯಾಯಾಲಯ, ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರಿಗೆ ನೀಡಿರುವ ನೋಟೀಸ್ ಸಂಖ್ಯೆ : 1/2005, 8/2005 ಮತ್ತು 12/2005.
2. ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರ ಉತ್ತರ, ದಿನಾಂಕ 24–03–2005.
3. ವಿಚಾರಣಾ ವರದಿ ದಿನಾಂಕ 16–10–2008 ನ್ಯಾಯಮೂರ್ತಿ ಶ್ರೀ ಎಸ್.ಆರ್. ಬನ್ನೂರಮಠ, ಕರ್ನಾಟಕ ಉಚ್ಚ ನ್ಯಾಯಾಲಯ ಮತ್ತು ವಿಚಾರಣಾಧಿಕಾರಿಗಳಿಂದ.
4. 2ನೇ ನೋಟೀಸ್ ಸಂಖ್ಯೆ : ಡಿ.ಐ./1/2005,8/2005 ಮತ್ತು 12/2005 ದಿನಾಂಕ 11.03.2009, ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಅವರಿಂದ.
5. 2ನೇ ನೋಟೀಸಿಗೆ ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರ ಉತ್ತರ, ದಿನಾಂಕ 28.03.2009.
6. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಇವರು ಸರ್ಕಾರಕ್ಕೆ ಬರೆದಿರುವ ಪತ್ರ ಸಂಖ್ಯೆ : ಡಿಐ 1, 8, 12/2005, ದಿನಾಂಕ 21–10–2010.
7. ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಟಿಪ್ಪಣಿ ಸಂಖ್ಯೆ : ಲಾ/ಎಲ್‌ಎಸ್/15373/comp/2010, ದಿನಾಂಕ 27–10–2010.

**ಪ್ರಸ್ತಾವನೆ :**

ಶ್ರೀ ಜಿ. ನರಹರಿ, ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯವು, ಮೇಲೆ(1) ರಲ್ಲಿ ಓದಲಾದ ದಿನಾಂಕ 10-03-2005ರ ದೋಷಾರೋಪಣೆ ಮಾಡುವ ಮೂಲಕ ಈ ಕೆಳಕಂಡ ಆರೋಪಗಳನ್ನು ಕುರಿತು ವಿವರವಾದ ವಿಚಾರಣೆ ನಡೆಸಿತು.

**ಇಲಾಖಾ ವಿಚಾರಣಾ ಸಂಖ್ಯೆ : 1/2005**

**ಆರೋಪ-1 :** ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರು ಇವರು ಬೆಳಗಾಂನ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕೋಲಾರ ಜಿಲ್ಲಾ ನ್ಯಾಯಾಲಯದ ಬೆರಳಚ್ಚುಗಾರ್ತಿಯಾದ ಶ್ರೀಮತಿ ಪದ್ಮ, ಇವರೊಂದಿಗೆ ಯಾವುದೇ ನ್ಯಾಯಯುತ ಮತ್ತು ಅಧಿಕೃತ ಕಾರಣಗಳು ಹಾಗೂ ಉದ್ದೇಶವಿಲ್ಲದೇ ಅತಿ ಹೆಚ್ಚಿನ ಸಂಖ್ಯೆಯಲ್ಲಿ ದೂರವಾಣಿ ಮೂಲಕ ಸಂವಾದಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (iii) ನ್ನು ಉಲ್ಲಂಘಿಸಿದ್ದಾರೆ.

**ಆರೋಪ-2 :** ಶ್ರೀಮತಿ ಪದ್ಮ ಇವರ ಕೋಲಾರದ ಜಿಲ್ಲಾ ನ್ಯಾಯಾಲಯದ ಕಚೇರಿ ದೂರವಾಣಿಗೆ, ಇವರ ಮನೆ ದೂರವಾಣಿಗೆ ಬೆಳಗಾಂನ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯದ ಕಚೇರಿಯ ದೂರವಾಣಿ (ದೂರವಾಣಿ ಸಂಖ್ಯೆ : 420500) ಮತ್ತು ಮನೆ ದೂರವಾಣಿ (ದೂರವಾಣಿ ಸಂಖ್ಯೆ : 420851) ಮೂಲಕ ಯಾವುದೇ ನ್ಯಾಯಯುತ ಮತ್ತು ಅಧಿಕೃತ ಕಾರಣಗಳು ಹಾಗೂ ಉದ್ದೇಶವಿಲ್ಲದೇ ಸಂವಾದ ನಡೆಸಿ ದೂರವಾಣಿಗಳನ್ನು ದುರುಪಯೋಗಪಡಿಸಿಕೊಳ್ಳುವುದರೊಂದಿಗೆ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (iii) ನ್ನು ಉಲ್ಲಂಘಿಸಿದ್ದಾರೆ.

**ಆರೋಪ-3 :** ದಿನಾಂಕ 27-05-2002 ರಿಂದ ದಿನಾಂಕ 31-12-2002ರ ಅವಧಿಯಲ್ಲಿ ಬೆಳಗಾಂನ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ತಮ್ಮ ಕಚೇರಿಯ ದೂರವಾಣಿ ಮೂಲಕ ಶ್ರೀಮತಿ ಪದ್ಮರವರೊಂದಿಗೆ 727 ಬಾರಿ ಸಂವಾದ ನಡೆಸಿರುವುದು, ಕರೆ ಮಾಡಿದ ವೇಳೆ, ಕರೆಗಳ ಅವಧಿ ಇತ್ಯಾದಿಗಳನ್ನು ಗಮನಿಸಿದಾಗ ಆರೋಪಿತರು ಕಛೇರಿ ದೂರವಾಣಿಯನ್ನು ದುರುಪಯೋಗ ಪಡಿಸಿಕೊಂಡಿರುವುದರೊಂದಿಗೆ ಆರೋಪಿತ ನ್ಯಾಯಾಂಗಾಧಿಕಾರಿಯವರು ನ್ಯಾಯಾಲಯದ ಕೆಲಸವನ್ನು ನಿರ್ಲಕ್ಷಿಸಿ ಕಚೇರಿ ಸಮಯವನ್ನು ದುರುಪಯೋಗಪಡಿಸಿಕೊಂಡು ತಮ್ಮ ಕರ್ತವ್ಯಕ್ಕೆ ಚ್ಯುತಿಯನ್ನುಂಟು ಮಾಡುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (iii) ನ್ನು ಉಲ್ಲಂಘಿಸಿದ್ದಾರೆ.

**ಆರೋಪ-4 :** ಕಛೇರಿ ದೂರವಾಣಿಯನ್ನು ಅನಧಿಕೃತ ಉದ್ದೇಶಗಳಿಗಾಗಿ ಬಳಸಕೊಡದೆಂಬುದು ಗೊತ್ತಿದ್ದಾಗ್ಯೂ ಸಹ ಶ್ರೀಮತಿ ಪದ್ಮರವರೊಂದಿಗೆ ನಡೆಸಿದ್ದಲ್ಲದೇ, ದೂರವಾಣಿ ಸಂವಾದವನ್ನು ಮರೆಮಾಚಲು ಸಂವಾದಿತ ಕರೆಗಳನ್ನು ತಮ್ಮ ಖಾಸಗಿ ಕರೆಗಳೆಂದು ಪ್ರಮಾಣೀಕರಿಸದೇ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (i) ನ್ನು ಉಲ್ಲಂಘಿಸಿದ್ದಾರೆ.

ಶ್ರೀ ಜಿ. ನರಹರಿ, ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಮೇಲೆ ಓದಲಾದ (2)ರ ದಿನಾಂಕ 24-03-2005 ರಲ್ಲಿ ನೀಡಿದ ಉತ್ತರಗಳನ್ನು ವಿಚಾರಣಾಧಿಕಾರಿಗಳು ಪರಿಶೀಲಿಸಿ ಮೇಲೆ ಓದಲಾದ (3)ರ ದಿನಾಂಕ 12-10-2008ರ ತಮ್ಮ ವಿಚಾರಣಾ ವರದಿಯಲ್ಲಿ ಈ ಕೆಳಕಂಡ ನಿರ್ಣಯಗಳನ್ನು ಕೈಗೊಂಡಿರುತ್ತಾರೆ.

ಶ್ರೀ ಜಿ. ನರಹರಿ, ಆರೋಪಿತ ಜಿಲ್ಲಾ ನ್ಯಾಯಾಧೀಶರು, ಇವರು ದಿನಾಂಕ 24-05-1999 ಮತ್ತು ದಿನಾಂಕ 26.05.2000ರ ಮಧ್ಯೆ ಕೋಲಾರದ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದುದು ಅಥವಾ ಇದೇ ಅವಧಿಯಲ್ಲಿ ಶ್ರೀಮತಿ ಪದ್ಮ ಇವರು ಬೆರಳಚ್ಚುಗಾರ್ತಿಯಾಗಿ ಕಾರ್ಯನಿರ್ವಹಿಸುತ್ತಿದ್ದುದು ವಿವಾದಾತೀತವಾಗಿದೆ. ಅದರಂತೆಯೇ, ಆರೋಪಿತ ಜಿಲ್ಲಾ ನ್ಯಾಯಾಧೀಶರು 27-05-2002 ಮತ್ತು 31-12-2002ರ ಮಧ್ಯೆ ಬೆಳಗಾಂನ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದುದು ವಿವಾದಾತೀತವಾಗಿದೆ. ಇದೇ ಅವಧಿಯಲ್ಲಿ ತಮ್ಮ ಕಚೇರಿ ದೂರವಾಣಿ ಸಂಖ್ಯೆ : 420500 ರಿಂದ ಶ್ರೀಮತಿ ಪದ್ಮರವರ ಕೋಲಾರ ಜಿಲ್ಲಾ ನ್ಯಾಯಾಲಯದ ಕಚೇರಿ (ದೂರವಾಣಿ ಸಂಖ್ಯೆ : 26981) ಹಾಗೂ ಮನೆಗೆ ದೂರವಾಣಿ (ದೂರವಾಣಿ ಸಂಖ್ಯೆ : 48264) 666 ಬಾರಿ ವಿವಿಧ ದಿನಗಳಂದು ಕರೆ ಮಾಡಿರುವುದು ಹಾಗೂ ಸದರಿಯವರ ಅಣ್ಣನ ಮನೆಗೆ (ದೂರವಾಣಿ ಸಂಖ್ಯೆ : 48010) 57 ಬಾರಿ ವಿವಿಧ ದಿನಗಳಂದು ಕರೆ ಮಾಡಿರುವುದು ದೂರಸಂಪರ್ಕ ಇಲಾಖೆಯು ಹೊರಡಿಸಿದ ಕರೆಗಳ ಪಟ್ಟಿಯಿಂದ ಕಂಡುಬಂದಿದೆ.

ಆರೋಪಿತ ಜಿಲ್ಲಾ ನ್ಯಾಯಾಧೀಶರು ನೀಡಿರುವ ತಮ್ಮ ಲಿಖಿತ ಹೇಳಿಕೆಯಲ್ಲಿ ಸದರಿಯವರು ಶ್ರೀಮತಿ ಪದ್ಮ ಹಾಗೂ ಅವರ ಕುಟುಂಬದ ಸದಸ್ಯರಿಗೆ ದೂರವಾಣಿ ಕರೆ ಮಾಡಿರುವುದನ್ನು ಒಪ್ಪಿಕೊಂಡಿದ್ದು ಕಂಡುಬಂದಿದೆ. ಆದರೆ ಆರೋಪಿತರು ಶ್ರೀಮತಿ ಪದ್ಮರವರೊಂದಿಗೆ ತಾವಲ್ಲದೇ ತಮ್ಮ ಪತ್ನಿ ಮತ್ತು ಕುಟುಂಬದ ಇತರ ಸದಸ್ಯರೂ ಮಾತನಾಡುತ್ತಿದ್ದರೆಂದು ಹಾಗೂ ಕೋಲಾರ ಜಿಲ್ಲಾ ನ್ಯಾಯಾಲಯಕ್ಕೆ ಕರೆ ಮಾಡಿದಾಗ ಕೇವಲ ಶ್ರೀಮತಿ ಪದ್ಮರವರೊಂದಿಗಲ್ಲದೇ ನ್ಯಾಯಾಲಯದ ಇತರ ಸಿಬ್ಬಂದಿ ವರ್ಗದೊಂದಿಗೆ ಮಾತನಾಡಿದ್ದರು ಎಂದು ವಾದಿಸಿದ್ದಾರೆ. ಆದರೆ ಸಿಬ್ಬಂದಿ ವರ್ಗದ ಸಾಕ್ಷಿಗಳನ್ನು ವಿಚಾರಿಸಿದಾಗ ಇವರುಗಳು ಆರೋಪಿತರೊಂದಿಗೆ ದೂರವಾಣಿಯಲ್ಲಿ ಮಾತನಾಡಿರುವುದನ್ನು ಅಲ್ಲಗಳೆದಿರುತ್ತಾರೆ. ಅಲ್ಲದೇ ಶ್ರೀಮತಿ ಪದ್ಮರವರು 21-10-2002 ರಿಂದ ಹೆರಿಗೆ ರಜೆಯ ಮೇಲೆ ತೆರಳಿದಾಗ ಆರೋಪಿತ ಜಿಲ್ಲಾ ನ್ಯಾಯಾಧೀಶರು ತಮ್ಮ ಕಚೇರಿಯ ದೂರವಾಣಿಯಿಂದ ಶ್ರೀಮತಿ ಪದ್ಮರವರ ಮನೆಗೆ ಹಾಗೂ ಇವರ ಅಣ್ಣ ಶ್ರೀ ವೆಂಕಟಸ್ವಾಮಿರವರ ಮನೆಗೆ ಮಾತ್ರ ಕರೆ ಮಾಡಿದ್ದು ಶ್ರೀಮತಿ ಪದ್ಮರವರ ಕಚೇರಿಗೆ ಒಂದು ಬಾರಿಯೂ ಕರೆ ಮಾಡದಿರುವುದು ದೂರಸಂಪರ್ಕ ಇಲಾಖೆಯ ಕರೆಗಳ ಪಟ್ಟಿಯಿಂದ ಕಂಡುಬಂದಿದೆ. ಈ ಮೂಲಕ ಆರೋಪಿತರು ಕೇವಲ ಶ್ರೀಮತಿ ಪದ್ಮರವರೊಂದಿಗೆ ಮಾತ್ರ ದೂರವಾಣಿ ಸಂವಾದ ನಡೆಸುತ್ತಿದ್ದರು ಎಂಬುದನ್ನು ಮನಗಾಣಲಾಗಿದೆ.

ಶ್ರೀ ಜಿ. ನರಹರಿ, ಇವರು ಬೆಳಗಾಂನ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ತಮ್ಮ ಕಚೇರಿಯ ದೂರವಾಣಿ ಮೂಲಕ ಶ್ರೀಮತಿ ಪದ್ಮರವರ ಮನೆಗೆ, ಕಚೇರಿಗೆ ಹಾಗೂ ಇವರ ಅಣ್ಣ ಶ್ರೀ ವೆಂಕಟಸ್ವಾಮಿರವರ ಮನೆಗೆ ಅನೇಕ ಬಾರಿ ಕಚೇರಿ ಸಮಯದಲ್ಲಿಯೇ ಮಾತನಾಡಿರುವುದು ದೂರಸಂಪರ್ಕ ಇಲಾಖೆಯ ದಾಖಲೆಗಳಿಂದ ಕಂಡುಬಂದಿದೆ. ಈ ಮೂಲಕ ಆರೋಪಿತರು ನ್ಯಾಯಾಲಯದ ಅಮೂಲ್ಯ ಸಮಯವನ್ನು ಹಾಳು ಮಾಡಿರುತ್ತಾರೆ. ಆದರೆ ಇದಕ್ಕೆ ಪ್ರತಿಯಾಗಿ ಆರೋಪಿತ ಜಿಲ್ಲಾ ನ್ಯಾಯಾಂಗಾಧಿಕಾರಿಗಳು ವಕೀಲರು ನಡೆಸಿದ ಸತ್ಯಾಗ್ರಹ, ಅಭಿಯೋಜಕರ ಗೈರುಹಾಜರಾತಿಯಲ್ಲಿ ಮಾತ್ರ ಶ್ರೀಮತಿ ಪದ್ಮರವರೊಂದಿಗೆ ಮಾತನಾಡಿರುವುದಾಗಿ ವಾದಿಸಿರುತ್ತಾರೆ. ಆದರೆ ಬೆಳಗಾಂನ ನ್ಯಾಯಾಲಯಗಳಲ್ಲಿ ಹೆಚ್ಚಿನ ಸಂಖ್ಯೆಯ ಪ್ರಕರಣಗಳಿದ್ದು ಈ ನ್ಯಾಯಾಲಯಗಳು ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿವೆ. ಕಚೇರಿ

ವೇಳೆಯಲ್ಲಿ ನ್ಯಾಯಾಲಯದ ಕಲಾಪಗಳು ನಡೆಯದ್ದಿದ್ದರೆ ಅದೊಂದು ಅಪವಾದವಾಗಿದ್ದು ನಿತ್ಯವೂ ಕಲಾಪಗಳು ನಡೆದಿರುವುದಿಲ್ಲ ಎಂದು ಹೇಳಲಾಗುವುದಿಲ್ಲ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಬಹುದಾಗಿದೆ. ಆದ್ದರಿಂದ ಈ ಮೇಲಿನ ಎಲ್ಲ ನಾಲ್ಕು ಆರೋಪಗಳು ಸಾಬೀತಾಗಿರುತ್ತವೆ.

**ಇಲಾಖಾ ವಿಚಾರಣಾ ಸಂಖ್ಯೆ : 8/2005**

**ಆರೋಪ–1 :** ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರು, ಇವರು ಬೆಳಗಾಂನ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕೋಲಾರ ಜಿಲ್ಲಾ ನ್ಯಾಯಾಲಯದಲ್ಲಿ ಶ್ರೀಮತಿ ಪದ್ಮ, ಇವರು ಬೆರಳಚ್ಚುಗಾರ್ತಿಯಾಗಿ ಕಾರ್ಯನಿರ್ವಹಿಸುತ್ತಿದ್ದರು. ಅದೇ ನ್ಯಾಯಾಲಯದ ಸೆಷನ್ಸ್ ಪ್ರಕರಣ ಸಂಖ್ಯೆ : 16/1991 ರಲ್ಲಿ ಶ್ರೀಮತಿ ಪದ್ಮ ಇವರ ಪತಿ ಶ್ರೀ ಶಂಕರಪ್ಪ ಹಾಗೂ ಅವರ ಮಾವ ಶ್ರೀ ವೆಂಕಟಸ್ವಾಮಿ ಮತ್ತು ಅವರ ಭಾವ ಶ್ರೀ ನಾರಾಯಣಮೂರ್ತಿ ಇವರೆಲ್ಲರೂ ಆರೋಪಿಗಳಾಗಿದ್ದು, ಈ ಆರೋಪಿಗಳು ಶ್ರೀಮತಿ ಪದ್ಮರವರ ಹತ್ತಿರದ ಸಂಬಂಧಿಗಳೆಂಬುದು ಸದರೀ ಆರೋಪಿತ ಜಿಲ್ಲಾ ನ್ಯಾಯಾಧೀಶರಿಗೆ ಗೊತ್ತಿದ್ದರೂ ಸಹ ವಿಚಾರಣೆಯ ಸಂದರ್ಭದಲ್ಲಿ ಆರೋಪಿಗಳ ಹೇಳಿಕೆಗಳನ್ನು ಶ್ರೀಮತಿ ಪದ್ಮರವರ ಕೈಬರಹದಲ್ಲಿ ದಾಖಲಿಸಲು ಅವಕಾಶ ನೀಡಿರುತ್ತಾರೆ ಮತ್ತು ಪ್ರಕರಣದ ವಿಚಾರಣೆ ನಡೆಸಿ ಎಲ್ಲ ಆರೋಪಿಗಳನ್ನು ದೋಷಮುಕ್ತರೆಂದು ತೀರ್ಪು ನೀಡಿ ಕರ್ತವ್ಯ ನಿಷ್ಠೆ ತೋರದೇ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (i), (ii) ಮತ್ತು (iii) ನ್ನು ಉಲ್ಲಂಘಿಸಿದ್ದಾರೆ.

**ಆರೋಪ–2 :** ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರು, ಇವರು ಕೋಲಾರದ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಇವರ ವಿರುದ್ಧ ವಿಚಾರಣೆ ಸಂಖ್ಯೆ 1/2005 ನ್ನು ಪ್ರಾರಂಭಿಸಿದ ನಂತರವೂ ಈ ವಿಚಾರಣೆಯಲ್ಲಿ ಸಾಕ್ಷಿಯಾದ ಶ್ರೀಮತಿ ಪದ್ಮರವರೊಂದಿಗೆ ತಮ್ಮ ಕಚೇರಿ ದೂರವಾಣಿ ಮೂಲಕ ಅವರ ಕಚೇರಿ ಹಾಗೂ ಮನೆಗೆ ದಿನಾಂಕ 1–1–2005 ರಿಂದ ದಿನಾಂಕ 15–5–2005ರ ಮಧ್ಯೆ 266 ಬಾರಿ ಮತ್ತು ದಿನಾಂಕ 18–5–2005 ರಿಂದ ದಿನಾಂಕ 03–7–2005ರ ಮಧ್ಯೆ 71 ಬಾರಿ ಹಾಗೂ ತಮ್ಮ ಮೊಬೈಲ್ ಸಂಖ್ಯೆ : 9448585276 ರ ಮೂಲಕ ಶ್ರೀಮತಿ ಪದ್ಮರವರ ಮೇಲೆ ವಿಚಾರಣೆ ವೇಳೆ ತಮ್ಮ ಪರವಾಗಿ ಹೇಳಿಕೆ ನೀಡುವಂತೆ ಪುಸಲಾಯಿಸುವ ದುರುದ್ದೇಶದಿಂದ ಸಂವಾದ ನಡೆಸಿ ಒಬ್ಬ ನ್ಯಾಯಾಧೀಶರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ ಹಾಗೂ ಪ್ರಾಮಾಣಿಕತೆ ಮೆರೆಯುವಲ್ಲಿ ವಿಫಲರಾಗುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (i), (ii) ಮತ್ತು (iii) ನ್ನು ಉಲ್ಲಂಘಿಸಿದ್ದಾರೆ.

**ಆರೋಪ–3 :** ಶ್ರೀಮತಿ ಪದ್ಮ ಇವರ ಪತಿಯಾದ ಶ್ರೀ ಶಂಕರಪ್ಪ ಇವರು ಶ್ರೀ ಜಿ. ನರಹರಿ ಇವರ ಮುಂದೆ ವಿಚಾರಣೆಯಲ್ಲಿದ್ದ ಸೆಷನ್ಸ್ ಪ್ರಕರಣ ಸಂಖ್ಯೆ : 16/1991 ರಲ್ಲಿ ಆರೋಪಿಗಳಾಗಿರುವುದು ತಮ್ಮ ಗಮನದಲ್ಲಿದ್ದರೂ ಸಹ ಈ ಸೆಷನ್ಸ್ ಪ್ರಕರಣದ ಆರೋಪಿಗಳನ್ನು ಹಾಗೂ ಶ್ರೀಮತಿ ಪದ್ಮರವರನ್ನು ತಮ್ಮ ಮನೆಯ ಧಾರ್ಮಿಕ ಕಾರ್ಯಗಳಿಗೆ ಆಹ್ವಾನಿಸಿ ಒಬ್ಬ ನ್ಯಾಯಾಧೀಶರಿಗೆ ಸಲ್ಲದ ರೀತಿಯಲ್ಲಿ ವರ್ತಿಸುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (i), (ii) ಮತ್ತು (iii) ನ್ನು ಉಲ್ಲಂಘಿಸಿದ್ದಾರೆ.

**ಆರೋಪ–4 :** ಅಕ್ಟೋಬರ್ 2004 ರಲ್ಲಿ ರೂ. 2000/– ಕ್ಕಿಂತ ಹೆಚ್ಚಿನ ಬೆಲೆಯ 2 ಮೊಬೈಲ್ ದೂರವಾಣಿಗಳನ್ನು ಖರೀದಿಸಿದ್ದು, ಖರೀದಿಸುವ ಪೂರ್ವದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದಿಂದ ಅನುಮತಿ ಪಡೆಯದೇ ಹಾಗು ಖರೀದಿಸಿದ ನಂತರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳ ನಿಯಮ 23(3) ರಂತೆ ಮಾನ್ಯ ಉಚ್ಚ ನ್ಯಾಯಾಲಯಕ್ಕೆ ವರದಿ ಮಾಡದೇ ದುರ್ನಡತೆ ಎಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (i), (ii) ಮತ್ತು (iii) ನ್ನು ಉಲ್ಲಂಘಿಸಿದ್ದಾರೆ.

**ಆರೋಪ–5 :** ಶ್ರೀಮತಿ ಪದ್ಮ ಇವರು ದಿನಾಂಕ 11–01–2002 ರಂದು ಕಾಲೇಜೊಂದರಲ್ಲಿ ವ್ಯಾಸಂಗ ಮಾಡಲು ಅನುಮತಿ ಕೋರಿ ಸಲ್ಲಿಸಿದ್ದ ಅರ್ಜಿಯನ್ನು ಕಾಲೇಜಿನ ಹೆಸರು ಮತ್ತು ಸ್ಥಳವನ್ನು ಖಚಿತಪಡಿಸಿಕೊಳ್ಳದೇ ಅನುಮತಿ ನೀಡುವುದರ ಮೂಲಕ ಹಾಗೂ ನ್ಯಾಯಾಲಯದ ಕಚೇರಿ ಸಮಯದಲ್ಲೇ ತರಗತಿಗಳು ನಡೆಯುವ ಕೋಲಾರದಿಂದ 35 ಕಿ.ಮೀ. ದೂರವಿರುವ ಕೆ.ಜಿ.ಎಫ್.ನ ಕಾಲೇಜೊಂದರಲ್ಲಿ ವ್ಯಾಸಂಗ ಮಾಡಲು ಅವಕಾಶ ನೀಡಿ ಕರ್ತವ್ಯ ನಿಷ್ಠೆ ತೋರದೆ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (i), (ii) ಮತ್ತು (iii) ನ್ನು ಉಲ್ಲಂಘಿಸಿದ್ದಾರೆ.

ಶ್ರೀ ಜಿ. ನರಹರಿ, ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಮೇಲೆ ಓದಲಾದ (2)ರ ದಿನಾಂಕ 24–03–2005 ರಲ್ಲಿ ನೀಡಿದ ಉತ್ತರಗಳನ್ನು ವಿಚಾರಣಾಧಿಕಾರಿಗಳು ಪರಿಶೀಲಿಸಿ ಮೇಲೆ ಓದಲಾದ (3)ರ ದಿನಾಂಕ 12–10–2008ರ ತಮ್ಮ ವಿಚಾರಣಾ ವರದಿಯಲ್ಲಿ ಈ ಕೆಳಕಂಡ ನಿರ್ಣಯಗಳನ್ನು ಕೈಗೊಂಡಿರುತ್ತಾರೆ.

ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರು, ಇವರು ಕೋಲಾರದ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕೋಲಾರ ಜಿಲ್ಲಾ ನ್ಯಾಯಾಲಯದಲ್ಲಿ ಶ್ರೀಮತಿ ಪದ್ಮ ಅವರು ಬೆರಳಚ್ಚುಗಾರ್ತಿಯಾಗಿ ಕಾರ್ಯನಿರ್ವಹಿಸುತ್ತಿದ್ದರು. ಅದೇ ನ್ಯಾಯಾಲಯದ ಸೆಷನ್ಸ್ ಪ್ರಕರಣ ಸಂಖ್ಯೆ : 16/1991 ರಲ್ಲಿ ಶ್ರೀಮತಿ ಪದ್ಮ ಅವರ ಪತಿ ಶ್ರೀ ಶಂಕರಪ್ಪ ಹಾಗೂ ಅವರ ಮಾವ ಶ್ರೀ ವೆಂಕಟಸ್ವಾಮಿ ಮತ್ತು ಅವರ ಭಾವ ಶ್ರೀ ನಾರಾಯಣಮೂರ್ತಿ ಇವರೆಲ್ಲರೂ ಆರೋಪಿಗಳಾಗಿದ್ದು, ಈ ಆರೋಪಿಗಳು ಶ್ರೀಮತಿ ಪದ್ಮರವರ ಹತ್ತಿರದ ಸಂಬಂಧಿಗಳೆಂಬುದು ಸದರೀ ಆರೋಪಿತ ಜಿಲ್ಲಾ ನ್ಯಾಯಾಧೀಶರಿಗೆ ಗೊತ್ತಿದ್ದರೂ ಸಹ ವಿಚಾರಣೆಯ ಸಂದರ್ಭದಲ್ಲಿ ಆರೋಪಿಗಳ ಹೇಳಿಕೆಗಳನ್ನು ಶ್ರೀಮತಿ ಪದ್ಮರವರ ಕೈಬರಹದಲ್ಲಿ ದಾಖಲಿಸಲು ಅವಕಾಶ ನೀಡಿರುತ್ತಾರೆ ಮತ್ತು ಪ್ರಕರಣದ ವಿಚಾರಣೆ ನಡೆಸಿ ಎಲ್ಲ ಆರೋಪಿಗಳನ್ನು ದೋಷಮುಕ್ತರೆಂದು ತೀರ್ಪು ನೀಡಿ ಕರ್ತವ್ಯ ನಿಷ್ಠೆ ತೋರುವಲ್ಲಿ ವಿಫಲರಾಗಿರುವ ಆರೋಪ ಕುರಿತಂತೆ ಮೇಲ್ಕಾಣಿಸಿದ ಕೋಲಾರ ಜಿಲ್ಲಾ ನ್ಯಾಯಾಲಯದ ಸೆಷನ್ಸ್ ಪ್ರಕರಣದ ವಿಚಾರಣೆಯನ್ನು ತಾವೇ ಮಾಡಿದ್ದಲ್ಲದೇ ಈ ಇಲಾಖಾ ವಿಚಾರಣೆಯ ಸಾಕ್ಷಿಯಾಗಿರುವ ಶ್ರೀಮತಿ ಪದ್ಮರವರಿಗೆ ಆರೋಪಿಗಳ ಹೇಳಿಕೆಗಳನ್ನು ಅವರ ಕೈಬರಹದಲ್ಲಿ ದಾಖಲಿಸಲು ಅವಕಾಶ ನೀಡಿರುವುದನ್ನು ಒಪ್ಪಿಕೊಂಡಿರುತ್ತಾರೆ. ಆದರೆ ಸೆಷನ್ಸ್ ಪ್ರಕರಣದ ವಿಚಾರಣೆಯನ್ನು ಕೈಗೆತ್ತಿಕೊಂಡಾಗ ಆರೋಪಿಗಳಲ್ಲಿ ಕೆಲವರು ಶ್ರೀಮತಿ ಪದ್ಮರವರ ಹತ್ತಿರದ ಸಂಬಂಧಿಗಳೆಂಬುದು ಆರೋಪಿತ ಜಿಲ್ಲಾ ನ್ಯಾಯಾಧೀಶರಿಗೆ ತಿಳಿದಿರಲಿಲ್ಲವೆಂದು ವಾದಿಸಿರುತ್ತಾರೆ.

ಆರೋಪಿತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣೆಗೊಳಪಡಿಸಿದ ಸಂದರ್ಭದಲ್ಲಿ ತಮ್ಮ ಲಿಖಿತ ಹೇಳಿಕೆಯ ಮೂಲಕ ಆರೋಪಿತರು ಶ್ರೀಮತಿ ಪದ್ಮ ಹಾಗೂ ಅವರ ಕುಟುಂಬ ವರ್ಗದವರೊಂದಿಗೆ ಹತ್ತಿರದ ಸಂಬಂಧ ಹೊಂದಿರುವುದು ತಿಳಿದು ಬಂದಿದೆ ಹಾಗೂ ವಿಚಾರಣೆ ವೇಳೆ ಶ್ರೀಮತಿ ಪದ್ಮರವರು ಆರೋಪಿತ ನ್ಯಾಯಾಧೀಶರನ್ನು ತಮ್ಮ ಪತಿಯವರಿಗೆ ಬೆಳಗಾಂವಿಗೆ ವರ್ಗಾವಣೆಯಾಗುವ 2 ತಿಂಗಳುಗಳ ಮೊದಲಷ್ಟೆ

ಪರಿಚಯಿಸಿದ್ದಾಗಿ ಸಾಕ್ಷಿ ಹೇಳಿದ್ದರೂ ಸಹ ಶ್ರೀ ಜಿ. ನರಹರಿ, ಆರೋಪಿತ ಜಿಲ್ಲಾ ನ್ಯಾಯಾಧೀಶರು ಇವರಿಗೆ ಕೋಲಾರ ಜಿಲ್ಲಾ ನ್ಯಾಯಾಲಯದ ಸೆಷನ್ಸ್ ಪ್ರಕರಣ ಸಂಖ್ಯೆ : 16/1991 ರಲ್ಲಿ ತನ್ನ ಪತಿ, ಭಾವ ಹಾಗೂ ಮಾವನವರೂ ಆಪಾದಿತಾರಾಗಿರುವ ಪ್ರಕರಣದ ವಿಚಾರಣೆ ಹಾಗೂ ತೀರ್ಪು ನೀಡುವ ವೇಳೆಯಲ್ಲಿ ಮಾಹಿತಿ ಇತ್ತು ಎಂದು ಒಪ್ಪಿಕೊಂಡಿರುತ್ತಾರೆ. ಆದ್ದರಿಂದ ಆರೋಪಿತರ ವಾದದಲ್ಲಿ ಸತ್ಯಾಂಶವಿರುವುದಿಲ್ಲ. ಈ ಮೂಲಕ ಮೇಲ್ಕಂಡ ಆರೋಪ (1) ಮತ್ತು (2) ಸಾಬೀತಾಗಿರುತ್ತವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಅಂಗೀಕರಿಸಬಹುದು.

ಶ್ರೀಮತಿ ಪದ್ಮ ಇವರ ಪತಿಯಾದ ಶ್ರೀ ಶಂಕರಪ್ಪ ಇವರು ಶ್ರೀ ಜಿ. ನರಹರಿ ಇವರ ಮುಂದೆ ವಿಚಾರಣೆಯಲ್ಲಿದ್ದ ಸೆಷನ್ಸ್ ಪ್ರಕರಣ ಸಂಖ್ಯೆ : 16/1991 ರಲ್ಲಿ ಆರೋಪಿಗಳಾಗಿರುವುದು ತಮ್ಮ ಗಮನದಲ್ಲಿದ್ದರೂ ಸಹ ಈ ಸೆಷನ್ಸ್ ಪ್ರಕರಣದ ಆರೋಪಿಗಳನ್ನು ಹಾಗೂ ಶ್ರೀಮತಿ ಪದ್ಮರವರನ್ನು ತಮ್ಮ ಮನೆಯ ಧಾರ್ಮಿಕ ಕಾರ್ಯಗಳಿಗೆ ಆಹ್ವಾನಿಸಿ ಒಬ್ಬ ನ್ಯಾಯಾಧೀಶರಿಗೆ ಸಲ್ಲದರೀತಿಯಲ್ಲಿ ವರ್ತಿಸಿದ್ದಾರೆ ಎಂಬ ಆರೋಪವನ್ನು ಆರೋಪಿತರು ಅಲ್ಲಗಳೆದಿರುವುದಿಲ್ಲ. ಈ ವಿಷಯವು ಸಂಬಂಧಿತ ಘಟನೆ ಮತ್ತು ಸಾಕ್ಷ್ಯಾಧಾರಗಳ ಮೂಲಕ ಈಗಾಗಲೇ ಬಿಂಬಿತವಾಗಿರುವುದರಿಂದ ಈ ಆರೋಪ ಸಾಬೀತಾಗಿರುತ್ತವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಬಹುದಾಗಿದೆ.

ಅಕ್ಟೋಬರ್ 2004 ರಲ್ಲಿ ರೂ. 2000/– ಕ್ಕಿಂತ ಹೆಚ್ಚಿನ ಬೆಲೆಯ 2 ಮೊಬೈಲ್ ದೂರವಾಣಿಗಳನ್ನು ಖರೀದಿಸಿದ್ದು, ಖರೀದಿಸುವ ಪೂರ್ವದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದಿಂದ ಅನುಮತಿ ಪಡೆಯದೇ ಹಾಗು ಖರೀದಿಸಿದ ನಂತರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳ ನಿಯಮ 23(3) ರಂತೆ ಮಾನ್ಯ ಉಚ್ಚ ನ್ಯಾಯಾಲಯಕ್ಕೆ ವರದಿ ಮಾಡದೇ ದುರ್ನಡತೆ ಎಸಗಿದ ಆರೋಪಕ್ಕೆ ಪ್ರತಿಯಾಗಿ ಮೊಬೈಲ್ ದೂರವಾಣಿಗಳ ಖರೀದಿಯ ಚಿಕ್ಕ ವಿಷಯವಾಗಿದ್ದು ದುರ್ನಡತೆ ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು ವಾದಿಸಿರುತ್ತಾರೆ ಮತ್ತು ಹಲವಾರು ನ್ಯಾಯಾಂಗಾಧಿಕಾರಿಗಳು ಇದೇ ರೀತಿಯಾಗಿ ಮೊಬೈಲ್‌ಗಳನ್ನು ಖರೀದಿಸಿದ್ದಾರೆಂದು ತಿಳಿಸಿದ್ದಾರೆ. ಆದರೆ ಅಂತಹ ನಿದರ್ಶನಗಳನ್ನು ನೀಡಿರುವುದಿಲ್ಲ. ಅಲ್ಲದೆ ನ್ಯಾಯಾಂಗಾಧಿಕಾರಿಗಳು ದುಬಾರಿ ವಸ್ತುಗಳನ್ನು ಖರೀದಿಸುವ ಪೂರ್ವದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದಿಂದ ಅನುಮತಿ ಪಡೆಯಬೇಕು ಇಲ್ಲವಾದರೆ ಖರೀದಿಸಿದ ನಂತರ ವರದಿ ಮಾಡಬೇಕೆಂಬ ನಿಯಮವಿದ್ದು, ಈ ಪ್ರಕ್ರಿಯೆಯನ್ನು ಅನುಸರಿಸುವಲ್ಲಿ ಆರೋಪಿತರು ವಿಫಲವಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳ ನಿಯಮ 23(3)ನ್ನು ಉಲ್ಲಂಘಿಸಿದ ಆರೋಪ ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯ ಅಂಗೀಕಾರ್ಹವಾಗಿದೆ.

ಶ್ರೀಮತಿ ಪದ್ಮ ಅವರು ದಿನಾಂಕ 11–01–2002 ರಂದು ಕಾಲೇಜೊಂದರಲ್ಲಿ ವ್ಯಾಸಂಗ ಮಾಡಲು ಅನುಮತಿ ಕೋರಿ ಸಲ್ಲಿಸಿದ್ದ ಅರ್ಜಿಯನ್ನು ಕಾಲೇಜಿನ ಹೆಸರು ಮತ್ತು ಸ್ಥಳವನ್ನು ಖಚಿತಪಡಿಸಿಕೊಳ್ಳದೇ ಅನುಮತಿ ನೀಡುವುದರ ಮೂಲಕ ಹಾಗೂ ನ್ಯಾಯಾಲಯದ ಕಚೇರಿ ಸಮಯದಲ್ಲೇ ತರಗತಿಗಳು ನಡೆಯುವ ಕೋಲಾರದಿಂದ 35 ಕಿ.ಮೀ. ದೂರವಿರುವ ಕೆ.ಜಿ.ಎಫ್.ನ ಕಾಲೇಜೊಂದರಲ್ಲಿ ವ್ಯಾಸಂಗ ಮಾಡಲು ಅವಕಾಶ ನೀಡಿ ಕರ್ತವ್ಯ ನಿಷ್ಠೆ ತೋರಿಲ್ಲವೆಂಬ ಆರೋಪ ಕುರಿತಂತೆ ಆರೋಪಿತ ಜಿಲ್ಲಾ ನ್ಯಾಯಾಧೀಶರು ಇಂತಹ ಅನುಮತಿಗಳನ್ನು ನೀಡುವುದು ಸಾಮಾನ್ಯ ಮತ್ತು ಮಾಮೂಲಿಯಾಗಿರುವುದರಿಂದ ತಾವು ಯಾವುದೇ ರೀತಿ ದುರ್ನಡತೆ ಎಸಗಿರುವುದಿಲ್ಲವೆಂದು ಸಮರ್ಥಿಸಿಕೊಂಡಿರುತ್ತಾರೆ. ಆದರೆ ಆರೋಪಿತರು ಕಾಲೇಜಿನ ಸ್ಥಳ, ತರಗತಿಗಳು ನಡೆಯುವ ಸಮಯಗಳ ಬಗ್ಗೆ ವಿಚಾರಣೆ ನಡೆಸಿದ್ದರೆ ನ್ಯಾಯಾಲಯದ ಕಚೇರಿ ಸಮಯದಲ್ಲೇ ವ್ಯಾಸಂಗ ಮಾಡಲು ಅನುಮತಿ ನೀಡುತ್ತಿರಲಿಲ್ಲ. ಆದರೆ ಆರೋಪಿತರ ಮತ್ತು ಶ್ರೀಮತಿ ಪದ್ಮರವರ ನಡುವೆ ಅನುಮಾನಾಸ್ಪದ ಸಂಬಂಧವಿರುದರಿಂದಲೇ ವ್ಯಾಸಂಗಕ್ಕಾಗಿ ಅನುಮತಿ ಕೋರಿ ಸಲ್ಲಿಸಿದ ಅರ್ಜಿಯನ್ನು ಅಂದೇ ವಿಲೆಗೊಳಿಸುವ ಮೂಲಕ ಎಲ್ಲ ನಿಯಮಗಳನ್ನು ಕಡೆಗಣಿಸಿರುತ್ತಾರೆ. ಈ ಮೂಲಕ 5ನೇ ಆರೋಪವು ಸಾಬೀತಾಗಿರುತ್ತದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಬಹುದಾಗಿದೆ.

**ಇಲಾಖಾ ವಿಚಾರಣಾ ಸಂಖ್ಯೆ : 12/2005**

**ಆರೋಪ–1 :** ಇಲಾಖಾ ವಿಚಾರಣೆ ಸಂಖ್ಯೆ : 8/2005 ರಲ್ಲಿ ಜಾರಿಗೊಳಿಸಲಾದ ಆರೋಪಗಳಿಗೆ ನೀಡಿದ ಉತ್ತರದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ವಿರುದ್ಧ ಅವಹೇಳನಾಕಾರಿ ಹಾಗೂ ಬೇಜವಾಬ್ದಾರಿಯುತ ಆರೋಪಗಳನ್ನು ಮಾಡುತ್ತಾ ಅತೀವ ಅವಿಧೇಯತೆಯನ್ನು ಪ್ರದರ್ಶಿಸಿ ಒಬ್ಬ ನ್ಯಾಯಾಧೀಶರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (iii) ನ್ನು ಉಲ್ಲಂಘಿಸಿದ್ದಾರೆ.

**ಆರೋಪ–2 :** ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರು, ಇವರು ಕೋಲಾರದ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸೆಷನ್ಸ್ ಪ್ರಕರಣ ಸಂಖ್ಯೆ : 16/1991 ರಲ್ಲಿನ ಆರೋಪಿಗಳ ಹೇಳಿಕೆಯನ್ನು ದಾಖಲಿಸಲು ಅನುಸರಿಸಿದ ಪ್ರಕ್ರಿಯೆಯು ಸಿ.ಆರ್.ಪಿ.ಸಿ. ಯ ಪರಿಚ್ಛೇದ 313 ರಂತೆ ಇರದೇ ಕಾನೂನಿಗೆ ವಿರುದ್ಧವಾಗಿದೆ. ಈ ಪ್ರಕ್ರಿಯೆಯನ್ನು ಕೇವಲ ಒಂದು ಔಪಚಾರಿಕವೆಂಬಂತೆ ತಳೆದ ನಿಲುವನ್ನು ಪ್ರಶ್ನಿಸಿದಕ್ಕಾಗಿ ನೀಡಿದ ಉತ್ತರಗಳು ಮಾನ್ಯ ಉಚ್ಚ ನ್ಯಾಯಾಲಯಕ್ಕೆ ನಿಷ್ಠೆ ತೋರದಿರುವ ಹಾಗೂ ಕರ್ತವ್ಯ ಪ್ರಜ್ಞೆಯನ್ನು ಮರೆಯುವಲ್ಲಿ ವಿಫಲರಾಗಿರುತ್ತಾರೆ. ಈ ಮೂಲಕ ಒಬ್ಬ ನ್ಯಾಯಾಧೀಶರಿಗೆ ಸಲ್ಲದ ರೀತಿಯಲ್ಲಿ ವರ್ತಿಸುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1) (i), (ii) ಮತ್ತು (iii) ನ್ನು ಉಲ್ಲಂಘಿಸಿದ್ದು.

ಶ್ರೀ ಜಿ. ನರಹರಿ, ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮೇಲೆ ಓದಲಾದ (2)ರ ದಿನಾಂಕ 24–03–2005 ರಲ್ಲಿ ನೀಡಿದ ಉತ್ತರಗಳನ್ನು ವಿಚಾರಣಾಧಿಕಾರಿಗಳು ಪರಿಶೀಲಿಸಿ ಮೇಲೆ ಓದಲಾದ (3)ರ ದಿನಾಂಕ 12–10–2008ರ ತಮ್ಮ ವಿಚಾರಣಾ ವರದಿಯಲ್ಲಿ ಈ ಕೆಳಕಂಡ ನಿರ್ಣಯಗಳನ್ನು ಕೈಗೊಂಡಿರುತ್ತಾರೆ.

ಇಲಾಖಾ ವಿಚಾರಣೆ ಸಂಖ್ಯೆ : 8/2005 ರಲ್ಲಿ ಜಾರಿಗೊಳಿಸಲಾದ ಆರೋಪಗಳಿಗೆ ನೀಡಿದ ಉತ್ತರದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ವಿರುದ್ಧ ಅವಹೇಳನಾಕಾರಿ ಹಾಗೂ ಬೇಜವಾಬ್ದಾರಿಯುತ ಆರೋಪಗಳನ್ನು ಮಾಡುತ್ತಾ ಅತೀವ ಅವಿಧೇಯತೆಯನ್ನು ಪ್ರದರ್ಶಿಸಿ ಒಬ್ಬ ನ್ಯಾಯಾಧೀಶರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ ಆರೋಪಕ್ಕೆ ಪ್ರತಿಯಾಗಿ ಆರೋಪಿತರು ತಮ್ಮನ್ನು ರಕ್ಷಿಸಿಕೊಳ್ಳಲು, ವ್ಯಾಪ್ತಿಯನ್ನು ಮೀರದಂತೆ ವಾದವನ್ನು ಮಂಡಿಸಲು ಅವಕಾಶವಿದೆ. ಆದರೆ ಆರೋಪಿತ ನ್ಯಾಯಾಂಗಾಧಿಕಾರಿಗಳು ಯಾವುದೇ ಆಧಾರಗಳಿಲ್ಲದೇ ವಿಚಾರಣಾ ಪ್ರಾಧಿಕಾರವನ್ನೂ ಟೀಕಿಸಿರುವುದರಿಂದ ಮೊದಲನೆ ಆರೋಪವು ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವು ಅಂಗೀಕಾರ್ಹವಾಗಿದೆ.

ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರು, ಇವರು ಕೋಲಾರದ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸೆಷನ್ಸ್ ಪ್ರಕರಣ ಸಂಖ್ಯೆ : 16/1991 ರಲ್ಲಿನ ಆರೋಪಿಗಳ ಹೇಳಿಕೆಯನ್ನು ದಾಖಲಿಸಲು ಅನುಸರಿಸಿದ ಪ್ರಕ್ರಿಯೆಯು

ಸಿ.ಆರ್.ಪಿ.ಸಿ. ಯ ಪರಿಚ್ಛೇದ 313 ರಂತೆ ಇರದೇ ಕಾನೂನಿಗೆ ವಿರುದ್ಧವಾಗಿದೆ. ಈ ಪ್ರಕ್ರಿಯೆಯನ್ನು ಕೇವಲ ಒಂದು ಔಪಚಾರಿಕತೆ ಎಂಬುದಾಗಿ ತಳೆದ ನಿಲುವನ್ನು ಪ್ರಶ್ನಿಸಿದಕ್ಕಾಗಿ ನೀಡಿದ ಉತ್ತರಗಳು ಮಾನ್ಯ ಉಚ್ಚ ನ್ಯಾಯಾಲಯಕ್ಕೆ ನಿಷ್ಠೆ ತೋರದಿರುವ ಹಾಗೂ ಕರ್ತವ್ಯ ಪ್ರಜ್ಞೆಯನ್ನು ಮರೆಯುವಲ್ಲಿ ವಿಫಲರಾಗಿರುತ್ತಾರೆ. ಅಲ್ಲದೇ ಒಬ್ಬ ನ್ಯಾಯಾಧೀಶರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದಾರೆ ಎಂಬ ಆರೋಪಕ್ಕೆ ಪ್ರತಿಯಾಗಿ ಆರೋಪಿತ ಜಿಲ್ಲಾ ನ್ಯಾಯಾಂಗಾಧಿಕಾರಿಗಳು ಸಿ.ಆರ್.ಪಿ.ಸಿ. ಯ ಪರಿಚ್ಛೇದ 313 ರಂತೆ ಆರೋಪಿಗಳ ಹೇಳಿಕೆಗಳನ್ನು ದಾಖಲಿಸುವಾಗ ಬೆಂಚ್ ಕ್ಲಾರ್ಕ್‌ರವರನ್ನು ನಂಬುವುದರಲ್ಲಿ ಯಾವುದೇ ತಪ್ಪಿಲ್ಲ ಎಂದು ವಾದಿಸಿರುತ್ತಾರೆ. ಆದರೆ ಮಾನ್ಯ ಸರ್ವೋಚ್ಚ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳು ಸಿ.ಆರ್.ಪಿ.ಸಿ. ಯ ಪರಿಚ್ಛೇದ 313 ರಂತೆ ಆರೋಪಿಗಳ ಹೇಳಿಕೆಗಳ ದಾಖಲಾತಿಯ ಮಹತ್ವವನ್ನು ಹಲವಾರು ಬಾರಿ ಉಚ್ಚರಿಸಿರುತ್ತವೆ. ಈ ಮಹತ್ವತೆಯು ನ್ಯಾಯಾಂಗಾಧಿಕಾರಿಗೆ ತಿಳಿದಿರಲಿಲ್ಲವೆಂಬುದು ಅವರ ಉತ್ತರದಿಂದ ಕಂಡುಬರುತ್ತದೆ. ಇದು ಅವರಿಗೆ ಕಾನೂನಿನ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದಿರುವುದನ್ನು ತೋರಿಸುತ್ತದೆಯೇ ವಿನಹ ಅವರ ದುರ್ನಡತೆಯನ್ನಲ್ಲ. ಆದ್ದರಿಂದ ಎರಡನೇ ಆರೋಪವು ಸಾಬೀತಾಗಿರುವುದಿಲ್ಲವೆಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಬಹುದಾಗಿದೆ.

ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸಿ ಶ್ರೀ ಜಿ. ನರಹರಿ, ಇವರಿಗೆ ಮೇಲೆ (4) ರಲ್ಲಿ ಓದಲಾದ ದಿನಾಂಕ 11.03.2009ರ ಎರಡನೇ ನೋಟೀಸ್ ನೀಡಿ ವಿಚಾರಣಾ ವರದಿಯ ಬಗ್ಗೆ ಏನಾದರೂ ಹೇಳುವುದಿದ್ದಲ್ಲಿ ಹೇಳಲು/ಲಿಖಿತ ಉತ್ತರ ನೀಡಲು ಅವಕಾಶ ಕಲ್ಪಿಸಲಾಯಿತು. ಶ್ರೀ ಜಿ. ನರಹರಿ ಅವರು ಮೇಲೆ (5) ರಲ್ಲಿ ಓದಲಾದ ದಿನಾಂಕ 28.03.2009 ರಲ್ಲಿ ಉತ್ತರ ಸಲ್ಲಿಸಿರುತ್ತಾರೆ. ಸದರಿಯವರ ಉತ್ತರಗಳನ್ನು ಪರಿಶೀಲಿಸಲಾಗಿ ಆರೋಪಿತರು ತಮ್ಮ ವಿರುದ್ಧ ಮಾಡಿದ ಆರೋಪಗಳಿಗೆ ಸಮರ್ಥನೀಯವಾದ ಉತ್ತರಗಳನ್ನು ನೀಡಿರುವುದಿಲ್ಲ. ಮುಂದುವರೆದು ಮೇಲೆ (7) ರಲ್ಲಿ ಓದಲಾದ ದಿನಾಂಕ 27-10-2010 ರಲ್ಲಿ ಸ್ವೀಕೃತವಾದ ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ಹಾಗೂ ಅದರೊಂದಿಗೆ ಸ್ವೀಕರಿಸಲಾದ ಶ್ರೀ ಜಿ. ನರಹರಿ, ಅವರ ದಿನಾಂಕ 25-10-2010ರ ಮನವಿಯನ್ನು ಪರಿಶೀಲಿಸಿದ ನಂತರ, ವಿಚಾರಣೆ ಸಂಖ್ಯೆ : 1/2005 ಮತ್ತು 8/2005 ರಲ್ಲಿನ ಎಲ್ಲ ಆರೋಪಗಳು ಸಾಬೀತಾಗಿದ್ದು ವಿಚಾರಣೆ ಸಂಖ್ಯೆ : 12/2005 ರಲ್ಲಿನ ಒಂದನೇ ಆರೋಪ ಸಾಬೀತಾಗಿದ್ದು, ಎರಡನೇ ಆರೋಪ ಸಾಬೀತಾಗಿರುವುದಿಲ್ಲ ಎಂಬ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 56 ಸೇಇಉನ್ಯಾ 2010, ಬೆಂಗಳೂರು, ದಿನಾಂಕ 06ನೇ ಏಪ್ರಿಲ್ 2011**

ಘನತೆವೆತ್ತ ಕರ್ನಾಟಕ ರಾಜ್ಯಪಾಲರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 9 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಿ. ನರಹರಿ, ಜಿಲ್ಲಾ ನ್ಯಾಯಾಧೀಶರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅದೇ ನಿಯಮಾವಳಿಯ ನಿಯಮ 8 (viii) ರ ಅನ್ವಯ ಸೇವೆಯಿಂದ ವಜಾಗೊಳಿಸಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಸೇವೆಗಳು-3)

ಪಿ.ಆರ್. 1050

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಕಾನೂನು ವರದಿ ಪರಿಷತ್ ನಿಯಮಗಳು 1983- ಕರಡು ಪರೀಕ್ಷಕರು (ಕನ್ನಡ ಮತ್ತು ಇಂಗ್ಲೀಷ್) ಈ ಹುದ್ದೆಯ ನೇಮಕಾತಿ ವಿಧಾನ ಪರಿಷ್ಕರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 125 ಎಸ್‌ಹೆಚ್‌ಸಿ 80, ದಿನಾಂಕ 26.09.1983.
2. ಕಾರ್ಯದರ್ಶಿ, ಕರ್ನಾಟಕ ಕಾನೂನು ವರದಿ ಪರಿಷತ್ ಇವರ ಪತ್ರ ಸಂಖ್ಯೆ : ಎಲ್‌ಆರ್‌ಸಿ 26/1995, ದಿನಾಂಕ 02-11-2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಕರ್ನಾಟಕ ಕಾನೂನು ವರದಿ ಪರಿಷತ್ ನಿಯಮಗಳು, 1983ರ ಕ್ರಮ ಸಂಖ್ಯೆ 7 ಮತ್ತು 10 ರಲ್ಲಿರುವ ಕನ್ನಡ ಮತ್ತು ಇಂಗ್ಲೀಷ್ ಕರಡು ಪರೀಕ್ಷಕರ (ಪ್ರೂಫ್ ರೀಡರ್ಸ್) ಹುದ್ದೆಯ ವೇತನ ಶ್ರೇಣಿಯು ರೂ. 8000-14800 ಇದ್ದು ಈ ಹುದ್ದೆಗಳನ್ನು ಪ್ರಸ್ತುತ ಸರ್ಕಾರಿ ಮುದ್ರಣಾಲಯ, ಕೆಂಗೇರಿ ಇಲ್ಲಿಂದ ನಿಯೋಜನೆ ಮೇಲೆ ತುಂಬಲಾಗುತ್ತಿದೆ. ಆದರೆ ಈ ಹುದ್ದೆಗಳನ್ನು ತುಂಬಲು ನಿರ್ದೇಶಕರು, ಸರ್ಕಾರಿ ಮುದ್ರಣಾಲಯ ಇವರನ್ನು ಕೋರಲಾಗಿ ಸರ್ಕಾರಿ ಮುದ್ರಣಾಲಯದಲ್ಲಿನ ಕರಡು ಪರೀಕ್ಷಕರ ಹುದ್ದೆಯ ವೇತನ ಶ್ರೇಣಿಯು ರೂ. 7275-13350 ಆಗಿದ್ದು, ಕರ್ನಾಟಕ ಕಾನೂನು ವರದಿ ಪರಿಷತ್‌ನ ಕರಡು ಪರೀಕ್ಷಕರ (ಪ್ರೂಫ್ ರೀಡರ್ಸ್) ಹುದ್ದೆಯ ವೇತನ ಶ್ರೇಣಿಯು ರೂ. 8000-14800 ಆಗಿರುವುದರಿಂದ ಸದರಿ ಹುದ್ದೆಗಳಿಗೆ ಸರ್ಕಾರಿ ಮುದ್ರಣಾಲಯದಿಂದ ಕರಡು ಪರೀಕ್ಷಕರನ್ನು ನಿಯೋಜಿಸಲು ಸಾಧ್ಯವಿಲ್ಲವೆಂದು ಶಿಕ್ಷಣ ಇಲಾಖೆ ತಿಳಿಸಿರುವ ಮೇರೆಗೆ ಪ್ರಸ್ತುತ ಪರಿಷತ್‌ನಲ್ಲಿ ಸರ್ಕಾರಿ ಮುದ್ರಣಾಲಯದಿಂದ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಕರಡು ಪರೀಕ್ಷಕರನ್ನು ವಾಪಸ್ಸು ಪಡೆದುಕೊಳ್ಳಲು ಮುದ್ರಣಾಲಯ ನಿರ್ಧರಿಸಿದೆ. ಇದೇ ವೇಳೆಯಲ್ಲಿ ಪರಿಷತ್‌ನ ಕರಡು ಪರೀಕ್ಷಕರ ಹುದ್ದೆಯ ವೇತನ ಶ್ರೇಣಿಯನ್ನು ಸರ್ಕಾರಿ ಮುದ್ರಣಾಲಯದಲ್ಲಿನ ಕರಡು ಪರೀಕ್ಷಕರ ಹುದ್ದೆಯ ವೇತನ ಶ್ರೇಣಿಗೆ ಬದಲಿಸಿದಲ್ಲಿ ಮುದ್ರಣಾಲಯದ ನೌಕರರನ್ನು ನಿಯೋಜಿಸಬಹುದು ಅಥವಾ ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಬಹುದು ಎಂದು ಸರ್ಕಾರಿ ಮುದ್ರಣಾಲಯದ ನಿರ್ದೇಶಕರು ಅಭಿಪ್ರಾಯಪಟ್ಟಿರುವುದರಿಂದ ಕರ್ನಾಟಕ ಕಾನೂನು ವರದಿ ಪರಿಷತ್ ನಿಯಮಗಳು, 1983ರ ಕ್ರಮ ಸಂಖ್ಯೆ 7 ಮತ್ತು 10 ರಲ್ಲಿರುವ ಕನ್ನಡ ಮತ್ತು ಇಂಗ್ಲೀಷ್ ಕರಡು ಪರೀಕ್ಷಕರ (ಪ್ರೂಫ್ ರೀಡರ್ಸ್) ಹುದ್ದೆಯ ವೇತನ ಶ್ರೇಣಿಯನ್ನು ರೂ. 8000-14800 ಗಳಿಂದ ಸರ್ಕಾರಿ ಮುದ್ರಣಾಲಯದ ಕರಡು ಪರೀಕ್ಷಕರ ಹುದ್ದೆಯ ವೇತನ ಶ್ರೇಣಿ ರೂ. 7275-13350 ಕ್ಕೆ ಬದಲಾಯಿಸಿ ತಿದ್ದುಪಡಿ ಮಾಡುವಂತೆ ಕರ್ನಾಟಕ ಕಾನೂನು ವರದಿ ಪರಿಷತ್‌ನ ಕಾರ್ಯದರ್ಶಿಯವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಈ ವಿಷಯವನ್ನು ದಿನಾಂಕ 11–03–2011 ರಂದು ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ಪರಿಶೀಲನಾ ಸಮಿತಿಯ ಉಪ ಸಮಿತಿಯಲ್ಲಿ ಚರ್ಚಿಸಲಾಗಿದೆ. ಸದರಿ ಸಭೆಯಲ್ಲಿ ಕರ್ನಾಟಕ ಕಾನೂನು ವರದಿ ಪರಿಷತ್ ನಿಯಮಗಳು, 1983ಕ್ಕೆ ವಿದ್ಯುಕ್ತ ತಿದ್ದುಪಡಿಯನ್ನು ಕಾಯ್ದಿರಿಸಿ ಒಂದು ಕಾರ್ಯಕಾರಿ ಆದೇಶವನ್ನು ಹೊರಡಿಸಲು ತೀರ್ಮಾನಿಸಲಾಗಿದೆ. ಆದುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 59 ಸೇಉಸ್ಯಾ 2010, ಬೆಂಗಳೂರು, ದಿನಾಂಕ 06ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ ಕರ್ನಾಟಕ ಕಾನೂನು ವರದಿ ಪರಿಷತ್ ನಿಯಮಗಳು, 1983ರ ಕ್ರಮ ಸಂಖ್ಯೆ 7 ಮತ್ತು 10 ರಲ್ಲಿರುವ ಕರಡು ಪರೀಕ್ಷಕರು (ಕನ್ನಡ) ಮತ್ತು ಕರಡು ಪರೀಕ್ಷಕರು (ಇಂಗ್ಲೀಷ್) ಈ ಹುದ್ದೆಗಳಿಗೆ ಕೆಳಕಂಡಂತೆ ವೇತನ ಶ್ರೇಣಿ, ಹುದ್ದೆಗಳ ಸಂಖ್ಯೆ ಹಾಗೂ ನೇಮಕಾತಿ ವಿಧಾನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗದಿಪಡಿಸಲಾಗಿದೆ.

| Sl. No. | Category of Posts | Scale of pay | No. of posts | Method of recruitment | Qualifi- cations |
|---|---|---|---|---|---|
| 7 | Proof Readers (Kannada) | 7275-13350 | 2 | By deputation of an official from Government printing press or an official of equivalent grade from any other State Civil Services or from High Court of Karnataka | - |
| 10 | Proof Readers (English) | 7275-13350 | 2 | By deputation of an official from Government printing press or an official of equivalent grade from any other State Civil Services or from High Court of Karnataka | - |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಸೇವೆಗಳು–3)

ಪಿ.ಆರ್. 1051

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ದಿನಗೂಲಿ ಆಧಾರದ ಮೇಲೆ/ಮಾಸಿಕ ವೇತನ ಸಿಬ್ಬಂದಿಯಾಗಿ ಸೇವೆ ಸಲ್ಲಿಸಿರುವವರಿಗೆ ನಿವೃತ್ತಿ ವೇತನ ಸೌಲಭ್ಯ ನೀಡಲು ಪರಿಗಣಿಸುವ ಸೇವೆಯ ಪರಿಷ್ಕರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 2 ಎಸ್‌ಎಲ್‌ಸಿ 90, ದಿನಾಂಕ 6–8–1990.
2. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 12 ಎಸ್‌ಎಲ್‌ಸಿ 97, ದಿನಾಂಕ 26–9–1998.
3. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 6 ಸನಿತಿ 2003, ದಿನಾಂಕ 30–9–2003.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 15 ಸೇಸ್ಥಅ 2004, ದಿನಾಂಕ 8–7–2004.
5. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 6 ಎಸ್‌ಆರ್‌ಎ 2003, ದಿನಾಂಕ 22–10–2007.

**ಪ್ರಸ್ತಾವನೆ :**

ದಿನಗೂಲಿ ಆಧಾರದ ಮೇಲೆ ವಿವಿಧ ಇಲಾಖೆಗಳಲ್ಲಿ ದಿನಾಂಕ 1–7–84ರ ಮುಂಚಿತವಾಗಿ ನೇಮಕವಾದ ನೌಕರರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ ದಿನಾಂಕ 6–8–1990 ರಂದು ಮೇಲೆ (1) ರಲ್ಲಿ ಓದಲಾಗಿರುವ ಆದೇಶದ ಪ್ಯಾರಾ 14 ರಲ್ಲಿ ಅವರುಗಳು ಪಿಂಚಣಿ ಸೌಲಭ್ಯವನ್ನು ಪಡೆಯಲು ಅರ್ಹತಾ ಸೇವೆಯನ್ನು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಯ ನಿಯಮ 248 ಎ ರನ್ವಯ ಲೆಕ್ಕ ಹಾಕಲು ಸೂಚಿಸಲಾಗಿತ್ತು. ನಿವೃತ್ತಿ ವೇತನ ಸೌಲಭ್ಯ ಪಡೆಯಲು ಕನಿಷ್ಠ 10 ವರ್ಷಗಳ ಅರ್ಹತಾ ಸೇವೆಯನ್ನು ಪೂರೈಸದೇ ಇರುವ ದಿನಗೂಲಿ ಆಧಾರದ ಮೇಲೆ/ಮಾಸಿಕ ವೇತನ ಸಿಬ್ಬಂದಿಯಾಗಿ ಸೇವೆ ಸಲ್ಲಿಸಿ ಸಕ್ರಮಗೊಂಡ ನೌಕರರ ಪ್ರಕರಣಗಳಲ್ಲಿ ಅವರು ದಿನಗೂಲಿ ಆಧಾರದ ಮೇಲೆ/ಮಾಸಿಕ ವೇತನ ಸಿಬ್ಬಂದಿಯಾಗಿ ಸಲ್ಲಿಸಿರುವ ಸೇವೆಯ 1/4 ಭಾಗ ಸೇವೆಯನ್ನು (ಗರಿಷ್ಠ ಮಿತಿ 3 ವರ್ಷಗಳು) ಕನಿಷ್ಠ ಅರ್ಹತಾ ಸೇವೆಗೆ ಕಡಿಮೆಯಾದ ಅವಧಿಗೆ ಸೇರ್ಪಡೆ ಮಾಡಲು ಮೇಲೆ (2) ರಲ್ಲಿ ಓದಲಾದ ದಿನಾಂಕ 26–9–1998ರ ಆದೇಶದಲ್ಲಿ ದಿನಾಂಕ 6–8–90 ರ ಆದೇಶದಲ್ಲಿನ ಪ್ಯಾರಾ 14 ನ್ನು ಪ್ರತಿಸ್ಥಾಪಿಸಲಾಗಿದೆ. ಸರ್ಕಾರಿ ನೌಕರರಿಗೆ ನಿವೃತ್ತಿ ವೇತನ ಪಡೆಯಲು ಅವರು ಕನಿಷ್ಠ 15 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಸಲ್ಲಿಸಬೇಕೆಂದು ಮೇಲೆ (3) ರಲ್ಲಿ ಓದಲಾದ ದಿನಾಂಕ 30–9–2003ರ ಆದೇಶದಲ್ಲಿ ಇದನ್ನು ಮಾರ್ಪಡಿಸಿರುವ ಹಿನ್ನೆಲೆಯಲ್ಲಿ ದಿನಾಂಕ 6–8–90 ರ ಆದೇಶದ ಪ್ಯಾರಾ 14 ನ್ನು ದಿನಾಂಕ 8.7.2004 ರ ಆದೇಶದಲ್ಲಿ (ಕ್ರಮ ಸಂಖ್ಯೆ 4 ರಲ್ಲಿ ಓದಲಾಗಿದೆ) ಸೂಕ್ತವಾಗಿ ತಿದ್ದುಪಡಿ ಮಾಡಲಾಗಿತ್ತು. ಕ್ರಮ ಸಂಖ್ಯೆ 5 ರಲ್ಲಿ ಓದಲಾದ ದಿನಾಂಕ 22–10–2007ರ ಆದೇಶದಲ್ಲಿ ಸರ್ಕಾರಿ ನೌಕರರಿಗೆ ನಿವೃತ್ತಿ ಸೌಲಭ್ಯವನ್ನು ಪಡೆಯಲು ನಿಗದಿಪಡಿಸಿರುವ 15 ವರ್ಷಗಳ ಕನಿಷ್ಠ ಅರ್ಹತಾದಾಯಕ ಸೇವೆಯನ್ನು 10 ವರ್ಷಗಳಿಗೆ ಇಳಿಸಲಾಗಿದೆ. ಸದರಿ ಆದೇಶವು ದಿನಾಂಕ 1.9.2003 ರಿಂದ ಅನ್ವಯವಾಗುವಂತೆ ಕಾಲ್ಪನಿಕವಾಗಿ ಪೂರ್ವಸ್ಥಿತಿಗೆ ತರಲಾದ ಕಾರಣದಿಂದಾಗಿ (restored notionally) ಲಭ್ಯವಾಗುವ ಆರ್ಥಿಕ ಸೌಲಭ್ಯಗಳು ಆದೇಶ ಹೊರಡಿಸಿದ ದಿನಾಂಕದಿಂದ ಅಂದರೆ ದಿನಾಂಕ 22–10–2007 ರಿಂದ ಮಾತ್ರ ಲಭ್ಯವಾಗುವುದೆಂದು ಸದರಿ ಆದೇಶದಲ್ಲಿ ಸೂಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ದಿನಗೂಲಿ ಆಧಾರದ ಮೇಲೆ/ಮಾಸಿಕ ವೇತನ ಸಿಬ್ಬಂದಿಯಾಗಿ ಸೇವೆ ಸಲ್ಲಿಸಿ ಸಕ್ರಮಗೊಂಡಿರುವ ನೌಕರರ ಪ್ರಕರಣಗಳನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 64 ಸೇಸ್ಥಅ 2011, ಬೆಂಗಳೂರು, ದಿನಾಂಕ 05ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ 6–8–1990 ರ ಆದೇಶ ಸಂಖ್ಯೆ ಡಿಪಿಎಆರ್ 2 ಎಲ್‌ಎಲ್‌ಸಿ 90 ರ ಪ್ಯಾರಾ 14 ರಲ್ಲಿರುವ 'short of 15 years' ನ್ನು 'short of 10 years' ಎಂದು ತಿದ್ದುಪಡಿ ಮಾಡಲಾಗಿದೆ. ಈ ತಿದ್ದುಪಡಿಯಿಂದೊದಗುವ ಸೌಲಭ್ಯವನ್ನು ದಿನಾಂಕ 1–9–2003 ರಿಂದ ಕಾಲ್ಪನಿಕವಾಗಿ ಲೆಕ್ಕ ಹಾಕತಕ್ಕದ್ದು. ಈ ತಿದ್ದುಪಡಿಯಿಂದೊದಗುವ ಆರ್ಥಿಕ ಸೌಲಭ್ಯವು ದಿನಾಂಕ 22–10–2007 ರಿಂದ ಮಾತ್ರ ಲಭ್ಯವಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.

(ಸೇವಾ ನಿಯಮಗಳು–2)

ಪಿ.ಆರ್. 1052

## ENERGY SECRETARIAT

**Sub:** Enhancement of wind power capacity from 4.2 MW to 37.8 MW in favour of M/s Suzlon Infrastucture Services Limited – reg.

**Read:** 1. Government Order No : EN 204 NCE 2009 dated : 20-05-2010.

2. Letter No : KRED/08/SISL-Hiremannapura (4.20 to 37.80 MW)/2011-577, dated 1/11-2-2011 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for allotment of 250.2 MW capacity Wind Power Project at Raichur, Bellary, Bijapur, Gulbarga and Haveri Districts in favour of M/s Suzlon Infrastructure Services Limited.

The Managing Director, Karnataka Renewable Energy Development Limited, Bangalore vide his letter read at (2) above, has recommended to enhance the wind power capacity from 4.2 MW (part capacity of 250.2 MW of Raichur District) to 37.8 at Hiremannapura, Kustagi Taluk of Koppal District in favour of M/s Suzlon Infrastructure Services Limited.

The proposal has been examined in detail and hence the following Order :-

**GOVERNMENT ORDER NO.: EN 101 NCE 2011, BANGALORE, DATED: 06-04-2011**

Government accords approval for enhancement of wind power capacity from 4.2 MW (part capacity of 250.2 MW of Raichur District) to 37.8 MW at Hiremannapura, Kustagi Taluk of Koppal District in favour of M/s Suzlon Infrastructure Services Limited as detailed below :

| Geographical Area details | Sanctioned capacity in MW | Enhancement proposed in stage-I | No. of WTGs & rating in kw |
|---|---|---|---|
| It is a plain area with no-significant orientation located on the NE of Hiremannapura & spread around Gudadur village. It appears to be agriculture lands and is covered in the following geographical co-ordinates :-<br>Latitude : 15°46'11" - 15°49'49"N<br>Longitude 76°16'39" - 76°20'33"E<br>Peaks ; 683, 690, 647, 659, 644 & 651 m Amsl.<br>Toposheet No : 57 A/5 | 4.2 MW | 33.6 MW | 37.8 mw (18x2100 kw) |

The Government has reserved the right to Cancel/modify this Order.

The other terms and conditions of the allotment Order read at (1) above shall continue as it is.

By order and in the name of the Governor of Karnataka,

**SURESH B. KRISHNAPPANAVAR,**

Under Secretary to Government,

Energy Department.

PR No. 1053

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ನಾಗರೀಕ ಸೇವಾ ನಿಯಮ 32ರಡಿ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಪಶುವೈದ್ಯಾಧಿಕಾರಿಗಳ ನೇಮಕಾತಿ ಅವಧಿಯನ್ನು ಮುಂದುವರೆಸಲು ಅನುಮತಿ ನೀಡುವಿಕೆ.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಪಸಂಮೀ 250 ಪಸಸೇ 2007, ದಿನಾಂಕ : 28-8-2007.
2. ಸರ್ಕಾರಿ ಅಧಿಸೂಚನೆ ಸಂಖ್ಯೆ : ಪಸಂಮೀ 250 ಪಸಸೇ 2007, ದಿನಾಂಕ : 8-10-2007.
3. ಪತ್ರ ಸಂಖ್ಯೆ : ಆಪಸಂ/ಸಿಬ್ಬಂದಿ-1/ವಿವ-31/2008-09, ದಿನಾಂಕ : 24-8-2009.
4. ಪತ್ರ ಸಂಖ್ಯೆ : ಆಪಸಂ/ಸಿಬ್ಬಂದಿ-1/ವಿವ-62/2009-10, ದಿನಾಂಕ : 11-1-2011.

ಪ್ರಸ್ತಾವನೆ :

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಅಧಿಸೂಚನೆಯಲ್ಲಿ ಇಲಾಖೆಯ ಒಟ್ಟು 167 ಪಶುವೈದ್ಯಾಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 32ರನ್ವಯ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಸ್ವಂತ ವೇತನ ಮತ್ತು ವೇತನಶ್ರೇಣಿಯಲ್ಲಿ ಸ್ವತಂತ್ರ ಪ್ರಭಾರದ ಮೇಲೆ ಒಂದು ವರ್ಷದ ಅವಧಿಗೆ ಸ್ವತಂತ್ರ ಪ್ರಭಾರದ ಮೇಲೆ ಕಾರ್ಯನಿರ್ವಹಿಸಲು ನೇಮಿಸಲಾಗಿದೆ.

2. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಅಧಿಸೂಚನೆಯಲ್ಲಿ ಡಾ॥ ಮನೋಹರ್.ಡಿ. ಕಬ್ಬೂರು, ಪಶುವೈದ್ಯಾಧಿಕಾರಿ ಹಾಗೂ ಡಾ॥ ಜಿ.ಎನ್. ನಾಗರಾಜು, ಪಶುವೈದ್ಯಾಧಿಕಾರಿ ಇವರುಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 32ರನ್ವಯ ಸ್ವಂತ ವೇತನ ಮತ್ತು ವೇತನಶ್ರೇಣಿಯಲ್ಲಿ ಸ್ವತಂತ್ರ ಪ್ರಭಾರದ ಮೇಲೆ ನೇಮಿಸಲಾಗಿದೆ.

3. ಮೇಲೆ ಓದಲಾದ ಕ್ರಮಸಂಖ್ಯೆ (3) ಮತ್ತು (4) ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ದಿನಾಂಕ : 28-8-2007 ಮತ್ತು ದಿನಾಂಕ : 8-9-2010 ರ ಆದೇಶಗಳಲ್ಲಿ 169 ಪಶುವೈದ್ಯಾಧಿಕಾರಿಗಳಿಗೆ ಸ್ವಂತ ವೇತನ ಮತ್ತು ವೇತನಶ್ರೇಣಿಯಲ್ಲಿ ಕೆ.ಸಿಎಸ್.ಆರ್. ನಿಯಮ 32 ರಡಿ ಸಹಾಯಕ ನಿರ್ದೇಶಕರ ಹುದ್ದೆಗೆ ಒಂದು ವರ್ಷದ ಅವಧಿಗೆ ನೇಮಿಸಲಾಗಿದ್ದು ಸದರಿ ಸ್ವತಂತ್ರ ಪ್ರಭಾರದ ಮೇಲಿನ ಅವಧಿ ಮುಕ್ತಾಯಗೊಂಡಿರುತ್ತದೆಂದು ಸದರಿ 167 ಹುದ್ದೆಗಳನ್ನು ಮುಂಬಡ್ತಿಯಿಂದಾಗಲೀ ಅಥವಾ ನೇರ ನೇಮಕಾತಿ ಮುಖಾಂತರವಾಗಲೀ ಭರ್ತಿ ಮಾಡದಿರುವುದರಿಂದ ಸ್ವತಂತ್ರ ಪ್ರಭಾರದ ಮೇಲೆ ನೇಮಿಸಿರುವ ಪಶುವೈದ್ಯಾಧಿಕಾರಿಗಳು ಸ್ವತಂತ್ರ ಪ್ರಭಾರದಲ್ಲಿಯೇ ಮುಂದುವರೆದಿರುತ್ತಾರೆಂದು ತಿಳಿಸಿರುತ್ತಾರೆ. ಈ ಎಲ್ಲಾ ಹುದ್ದೆಗಳು ತಾಲ್ಲೂಕು ಮತ್ತು ಗ್ರಾಮೀಣ ಪ್ರದೇಶದಲ್ಲಿದ್ದು, ಸ್ವತಂತ್ರ ಪ್ರಭಾರದ ಸಹಾಯಕ ನಿರ್ದೇಶಕರುಗಳು ಯೋಜನಾ ಕಾರ್ಯಕ್ರಮಗಳ ಅನುಷ್ಠಾನಾಧಿಕಾರಿಗಳಾಗಿ, ತಾಲ್ಲೂಕಿನ ನಿಯಂತ್ರಣಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವುದರಿಂದ ರೈತಾಪಿ ವರ್ಗ ಹಾಗೂ ಜಾನುವಾರುಗಳ ಚಿಕಿತ್ಸಾ ದೃಷ್ಟಿಯಿಂದ ಅವರುಗಳ ಸೇವೆಯು ಪಶುವೈದ್ಯಕೀಯ ಆಸ್ಪತ್ರೆಗಳಿಗೆ ತುಂಬಾ ಅವಶ್ಯಕವಾಗಿರುತ್ತದೆಂದು ತಿಳಿಸಿರುತ್ತಾರೆ. ಕೆ.ಸಿ.ಎಸ್.ಆರ್. ನಿಯಮ 32ರಡಿ ಕಾರ್ಯನಿರ್ವಹಿಸುತ್ತಿರುವ 169 ಪಶುವೈದ್ಯಾಧಿಕಾರಿಗಳ ಪೈಕಿ ಡಾ॥ ಜಿ.ಎಂ. ಜಯರಾಮು ಇವರಿಗೆ ಈಗಾಗಲೇ ಸಹಾಯಕ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಿರುವುದರಿಂದ, ಡಾ॥ ರಘುಪತಿ. ಎಸ್. ಆಚಾರ್ಯ, ಡಾ॥ ನಾರಾಯಣ ಹೆಗಡೆ, ಡಾ॥ ದಯಾನಂದ ಪೈ, ಡಾ॥ ಎ.ಎಲ್. ನಾಗರಾಜಯ್ಯ, ಇವರುಗಳಿಗೆ ತಾತ್ಕಾಲಿಕವಾಗಿ ಮುಂಬಡ್ತಿ ತ್ಯಜಿಸಿ ಪಶುವೈದ್ಯಾಧಿಕಾರಿ ಹುದ್ದೆಯಲ್ಲಿಯೇ ಮುಂದುವರೆಯಲು ಅನುಮತಿ ನೀಡಿರುವುದರಿಂದ, ಡಾ॥ ವಿ.ಎಸ್. ವೀರನಗೌಡರ್ ಇವರಿಗೆ ಸ್ವ-ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿರುವುದರಿಂದ, ಸದರಿ 6 ಅಧಿಕಾರಿಗಳನ್ನು ಹೊರತುಪಡಿಸಿ ಉಳಿದ 161 ಪಶುವೈದ್ಯಾಧಿಕಾರಿಗಳನ್ನು ಸ್ಥಾನಪನ್ನ ಮುಂಬಡ್ತಿ ನೀಡುವವರೆಗೂ ಅಥವಾ ನೇರ ನೇಮಕಾತಿಯಡಿ ತುಂಬುವವರೆಗೆ ಮುಂದುವರೆಸಲು ಅನುಮತಿ ನೀಡುವಂತೆ ಹಾಗೂ ಸ್ವತಂತ್ರ ಪ್ರಭಾರದಲ್ಲಿ ಮುಂದುವರೆಯುತ್ತಿರುವ ಪಶುವೈದ್ಯಾಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 68 ರನ್ವಯ 6 ತಿಂಗಳಿಗೂ ಮೀರಿ ಪ್ರಭಾರ ಭತ್ಯೆ ಪಡೆಯಲು ಮತ್ತು ಇನ್ನೂ ಕೆಲವು ಅಧಿಕಾರಿಗಳಿಗೆ ಸ್ವತಂತ್ರ ಪ್ರಭಾರದ ಅವಧಿ ಮುಕ್ತಾಯಗೊಂಡ ನಂತರವೂ ಪ್ರಭಾರ ಭತ್ಯೆ ಪಡೆಯಲು ಮಂಜೂರಾತಿ ನೀಡಿರುವುದಕ್ಕೆ ಘಟನೋತ್ತರ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಅಲ್ಲದೇ ಡಾ॥ ಪಿ. ಸುರೇಶ್ ಭಟ್ ಇವರು ಸ್ವತಂತ್ರ ಪ್ರಭಾರ ಇರಿಸಿದ ನಂತರ ವೈಯುಕ್ತಿಕ ಕಾರಣದಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ಹಾಜರಾಗದೇ ಪಶುವೈದ್ಯಾಧಿಕಾರಿಯಾಗಿ ಪಶುಚಿಕಿತ್ಸಾಲಯ, ಕೊಳ್ತಿಗೆ, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿಯೇ ಮುಂದುವರೆದಿದ್ದು ತದನಂತರ ದಿನಾಂಕ : 4-8-2009 ರಂದು ಅರ್ಜಿ ಸಲ್ಲಿಸಿ ನಿಯುಕ್ತಿಗೊಳಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ಕೋರಿದ್ದ ಮೇರೆಗೆ, ಸದರಿ ಅಧಿಕಾರಿಗೆ ಅಂದಿನ ಆಯುಕ್ತರು ದಿನಾಂಕ : 10-8-2009 ರಂದು ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಿದ್ದು, ಈ ಅವಧಿಯಲ್ಲಿ ಸ್ವತಂತ್ರ ಪ್ರಭಾರದ ಮುಂದುವರಿಕೆ ಆದೇಶ ಇಲ್ಲದ ಕಾರಣ ಸದರಿ ಕ್ರಮಕ್ಕೆ ಸ್ಥಿರೀಕರಣ ನೀಡುವಂತೆ ಕೋರಿರುತ್ತಾರೆ.

4. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ದಿನಾಂಕ : 28-8-2007 ಮತ್ತು ದಿನಾಂಕ : 8-9-2010ರ ಆದೇಶಗಳನ್ವಯ ಒಟ್ಟು 169 ಪಶುವೈದ್ಯಾಧಿಕಾರಿಗಳಿಗೆ ಸ್ವಂತ ವೇತನ ಮತ್ತು ವೇತನಶ್ರೇಣಿಯಲ್ಲಿ ಕೆ.ಸಿಎಸ್.ಆರ್. ನಿಯಮ 32ರಡಿ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಒಂದು ವರ್ಷದ ಅವಧಿಗೆ ನೇಮಿಸಲಾಗಿದ್ದು, ಸ್ವತಂತ್ರ ಪ್ರಭಾರದ ಮೇಲಿನ ನೇಮಕಾತಿ ಅವಧಿಯು ದಿನಾಂಕ : 27-8-2008ಕ್ಕೆ ಮುಕ್ತಾಯಗೊಂಡಿರುತ್ತದೆ. ಸದರಿ 169 ಪಶುವೈದ್ಯಾಧಿಕಾರಿಗಳ ಪೈಕಿ ಡಾ॥ಜಿ.ಎಂ. ಜಯರಾಮು (ಜೇಷ್ಠತಾ ಸಂಖ್ಯೆ : 721-ಕ್ರಮಸಂಖ್ಯೆ : 1) ಇವರಿಗೆ ಈಗಾಗಲೇ ಸಹಾಯಕ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ ಹಾಗೂ ಡಾ॥ ರಘುಪತಿ ಎಸ್. ಆಚಾರ್ಯ (ಜೇಷ್ಠತಾ ಸಂಖ್ಯೆ : 567-ಕ್ರಮಸಂಖ್ಯೆ 32), ಡಾ॥ ನಾರಾಯಣ ಹೆಗಡೆ (ಜೇಷ್ಠತಾ ಸಂಖ್ಯೆ : 624 ಕ್ರಮ ಸಂಖ್ಯೆ : 91), ಡಾ॥ ದಯಾನಂದ ಪೈ (ಜೇಷ್ಠತಾ ಸಂಖ್ಯೆ 677-ಕ್ರಮ ಸಂಖ್ಯೆ 132), ಡಾ॥ ಎ.ಎಲ್. ನಾಗರಾಜಯ್ಯ (ಜೇಷ್ಠತಾ ಸಂಖ್ಯೆ 723-ಕ್ರಮ ಸಂಖ್ಯೆ 165), ಈ ನಾಲ್ಕು ಅಧಿಕಾರಿಗಳಿಗೆ ಮುಂಬಡ್ತಿಯನ್ನು ತಾತ್ಕಾಲಿಕವಾಗಿ ತ್ಯಜಿಸಿ ಪಶುವೈದ್ಯಾಧಿಕಾರಿ ಹುದ್ದೆಯಲ್ಲಿಯೇ ಮುಂದುವರೆಯಲು, ಡಾ॥ ವಿ. ರಮೇಶ್ ಉಪಾಧ್ಯಾಯ (ಜೇಷ್ಠತಾ ಸಂಖ್ಯೆ 572- ಕ್ರಮ ಸಂಖ್ಯೆ 40), ಇವರಿಗೆ ಸ್ವತಂತ್ರ ಪ್ರಭಾರದ ಮೇಲೆ ಸಹಾಯಕ ನಿರ್ದೇಶಕರ ಹುದ್ದೆಗೆ ನೇಮಿಸಿರುವುದನ್ನು ರದ್ದುಪಡಿಸಿ ಪಶುವೈದ್ಯಾಧಿಕಾರಿ ಹುದ್ದೆಯಲ್ಲಿಯೇ ಮುಂದವರೆಯಲು ಅನುಮತಿ ನೀಡಲಾಗಿದೆ ಮತ್ತು ಡಾ॥ ವಿ.ಎಸ್.ವೀರಣ್ಣಗೌಡ್ರ (ಜೇಷ್ಠತಾ ಸಂಖ್ಯೆ : 652-ಕ್ರಮ ಸಂಖ್ಯೆ : 107), ಸರ್ಕಾರಿ ಸೇವೆಯಿಂದ ಸ್ವ-ಇಚ್ಛಾ ನಿವೃತ್ತಿ ಹೊಂದಲು ಅನುಮತಿ

ನೀಡಲಾಗಿದೆ. ಸದರಿ ಏಳು ಅಧಿಕಾರಿಗಳನ್ನು ಹೊರತುಪಡಿಸಿ ಪ್ರಸ್ತುತ 162 ಅಧಿಕಾರಿಗಳು ಕೆ.ಸಿ.ಎಸ್.ಆರ್. ನಿಯಮ 32ರಡಿ ಸ್ವತಂತ್ರ ಪ್ರಭಾರದ ಮೇಲೆ ಸಹಾಯಕ ನಿರ್ದೇಶಕರಾಗಿ ಮುಂದುವರೆದಿದ್ದು, ಅವರುಗಳು ಕಾರ್ಯನಿರ್ವಹಿಸುತ್ತಿರುವ ಬಹುತೇಕ ಪಶುವೈದ್ಯಕೀಯ ಸಂಸ್ಥೆಗಳು ತಾಲ್ಲೂಕು ಮತ್ತು ಗ್ರಾಮೀಣ ಪ್ರದೇಶದಲ್ಲಿರುತ್ತದೆ. ಸದರಿ ಅಧಿಕಾರಿಗಳು ಯೋಜನಾ ಕಾರ್ಯಕ್ರಮಗಳ ಅನುಷ್ಠಾನಾಧಿಕಾರಿಗಳಾಗಿ ತಾಲ್ಲೂಕಿನ ನಿಯಂತ್ರಣಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ರೈತಾಪಿ ವರ್ಗ ಹಾಗೂ ಜಾನುವಾರುಗಳ ಚಿಕಿತ್ಸಾ ದೃಷ್ಟಿಯಿಂದ ಅವರುಗಳ ಸ್ವತಂತ್ರ ಪ್ರಭಾರದ ಮೇಲಿನ ನೇಮಕಾತಿಯನ್ನು ಮುಂದುವರೆಸುವುದು ಅವಶ್ಯಕವಾಗಿರುತ್ತದೆ. ಸ್ಥಾನಪನ್ನ ಮುಂಬಡ್ತಿ ನೀಡುವವರೆಗೂ ಅಥವಾ ನೇರ ನೇಮಕಾತಿಯಡಿ ತುಂಬುವವರೆಗೆ ಮುಂದುವರೆಸಲು ಪಶುವೈದ್ಯಾಧಿಕಾರಿಗಳ ಸ್ವತಂತ್ರ ಪ್ರಭಾರದ ನೇಮಕಾತಿಯನ್ನು ಮುಂದುವರೆಸುವಂತೆ ಇಲಾಖಾ ಆಯುಕ್ತರು, ಶಿಫಾರಸ್ಸು ಮಾಡಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 32ರಡಿ ಸ್ವತಂತ್ರ ಪ್ರಭಾರದ ಮೇಲೆ ಸಹಾಯಕ ನಿರ್ದೇಶಕರ ಹುದ್ದೆಗೆ ನೇಮಿಸಿದ್ದ 169 ಪಶುವೈದ್ಯಾಧಿಕಾರಿಗಳ ಪೈಕಿ ಈಗಾಗಲೇ ಸ್ಥಾನಪನ್ನ ಮುಂಬಡ್ತಿ ಹೊಂದಿರುವ/ತಾತ್ಕಾಲಿಕವಾಗಿ ಮುಂಬಡ್ತಿ ತ್ಯಜಿಸಿ ಪಶುವೈದ್ಯಾಧಿಕಾರಿ ಹುದ್ದೆಯಲ್ಲಿಯೇ ಮುಂದುವರೆದಿರುವ/ಸರ್ಕಾರಿ ಸೇವೆಯಿಂದ ಸ್ವ–ಇಚ್ಛಾ ನಿವೃತ್ತಿ ಹೊಂದಿರುವ 7 ಅಧಿಕಾರಿಗಳನ್ನು ಹೊರತುಪಡಿಸಿ ಉಳಿದ 162 ಪಶುವೈದ್ಯಾಧಿಕಾರಿಗಳ ಸ್ವತಂತ್ರ ಪ್ರಭಾರದ ನೇಮಕಾತಿ ಅವಧಿಯನ್ನು ಇಲಾಖಾ ಹಿತದೃಷ್ಟಿಯಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡುವವರೆಗೆ ಅಥವಾ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ನೇರ ನೇಮಕಾತಿ ಅಡಿ ತುಂಬುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸುವ ಸಂಬಂಧ ಅನುಮತಿ ನೀಡಲು ತೀರ್ಮಾನಿಸಿದೆ ಹಾಗೂ ಸ್ವತಂತ್ರ ಪ್ರಭಾರದಲ್ಲಿ ಮುಂದುವರೆಯುತ್ತಿರುವ ಪಶುವೈದ್ಯಾಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 68ರನ್ವಯ 6 ತಿಂಗಳಿಗೂ ಮೀರಿ ಸಹಾಯಕ ನಿರ್ದೇಶಕರ ಹುದ್ದೆಯ ಪ್ರಭಾರ ಭತ್ಯೆ ಪಡೆಯಲು ಮತ್ತು ಸ್ವತಂತ್ರ ಪ್ರಭಾರದ ಅವಧಿ ಮುಕ್ತಾಯಗೊಂಡ ನಂತರವೂ ಪ್ರಭಾರ ಭತ್ಯೆಯನ್ನು ಪಡೆಯಲು ಇಲಾಖಾ ಆಯುಕ್ತರು ಮಂಜೂರಾತಿ ನೀಡಿ ಕ್ರಮವಹಿಸಿರುವುದಕ್ಕೆ ಘಟನೋತ್ತರ ಮಂಜೂರಾತಿ ತೀರ್ಮಾನಿಸಿದೆ ಮತ್ತು ಡಾ॥ ಪಿ. ಸುರೇಶ್ ಭಟ್ (ಜೇಷ್ಠತಾ ಸಂಖ್ಯೆ : 575, ಕ್ರಮ ಸಂಖ್ಯೆ 43) ಇವರಿಗೆ ಸ್ವತಂತ್ರ ಪ್ರಭಾರದ ಮೇಲೆ ನೇಮಿಸಿದ್ದ ಸ್ಥಳ ವೀರ್ಯ ಸಂಕಲನಾ ಕೇಂದ್ರ, ಕೊಯಿಲಾ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಲು ಇಲಾಖಾ ಆಯುಕ್ತರು ದಿನಾಂಕ : 10–8–2009 ರಂದು ಅನುಮತಿ ನೀಡಿರುವ ಕ್ರಮಕ್ಕೆ ಸ್ಥಿರೀಕರಣ ನೀಡಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 547 ಪಸಸೇ 2009, ಬೆಂಗಳೂರು, ದಿನಾಂಕ : 4ನೇ ಮಾರ್ಚ್ 2011**

ಪ್ರಸ್ತಾವನೆಯ ವಿವರಿಸಿರುವ ಹಿನ್ನೆಲೆಯಲ್ಲಿ, ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 32 ರನ್ವಯ ಸ್ವಂತ ವೇತನ ಮತ್ತು ವೇತನ ಶ್ರೇಣಿ ಮೇಲೆ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ 162 ಪಶುವೈದ್ಯಾಧಿಕಾರಿಗಳ ಸ್ವತಂತ್ರ ಪ್ರಭಾರದ ನೇಮಕಾತಿ ಅವಧಿಯನ್ನು " ಸಹಾಯಕ ನಿರ್ದೇಶಕರು ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡುವವರೆಗೆ ಅಥವಾ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ನೇರ ನೇಮಕಾತಿ ಅಡಿ ತುಂಬುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ" ಮುಂದುವರೆಸಲು ಅನುಮತಿ ನೀಡಿದೆ.

| ಕ್ರಮ ಸಂಖ್ಯೆ | ಜೇಷ್ಠತಾ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳ |
|---|---|---|
| 1 | 2 | 3 |
| 1. | 520 | ಡಾ॥ ಎಸ್. ಲಿಂಗರಾಜಣ್ಣ, ಪಶು ಆಸ್ಪತ್ರೆ, ಗುಬ್ಬಿ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. |
| 2. | 523 | ಡಾ॥ ಎನ್. ಕೃಷ್ಣಮೂರ್ತಿ, ಪಶು ಆಸ್ಪತ್ರೆ, ಕಳ್ಳಂಬೆಳ್ಳ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ. |
| 3. | 536 | ಡಾ॥ ಆರ್.ಎನ್. ನವೀನ್, ಪಶು ಆಸ್ಪತ್ರೆ, ಪೊನ್ನಂಪೇಟೆ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ. |
| 4. | 539 | ಡಾ॥ ಹೆನ್ರಿ ರೊನಾಲ್ಡ್ ಲಸ್ರಾದೋ, ಪಶು ಆಸ್ಪತ್ರೆ, ಕಲ್ಲಡ್ಕ, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. |
| 5. | 540 | ಡಾ॥ ಎಸ್.ಎಸ್. ಆನಂದ, ಪಶು ಆಸ್ಪತ್ರೆ, ಶುಂಠಿಕೊಪ್ಪ, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ. |
| 6. | 894 | ಡಾ॥ ಎಸ್.ಎಲ್. ನಂದ, ಪಶು ಆಸ್ಪತ್ರೆ, ಹಿರೇನಲ್ಲೂರು, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. |
| 7. | 541 | ಡಾ॥ ಆನಂದ ಪಾಲೇಕರ್, ಪಶು ಆಸ್ಪತ್ರೆ, ಹಾವೇರಿ, ಹಾವೇರಿ ತಾಲ್ಲೂಕು, ಹಾವೇರಿ ಜಿಲ್ಲೆ |
| 8. | 542 | ಡಾ॥ ನಂದಕುಮಾರ್ ಪೈ, ಪಶು ಆಸ್ಪತ್ರೆ, ತಾಳಗುಪ್ಪ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 9. | 543 | ಡಾ॥ ಡಿ. ರಾಮಪ್ರಕಾಶ್, ಪಶು ಆಸ್ಪತ್ರೆ, ಉಪ್ಪಿನಂಗಡಿ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. |
| 10. | 544 | ಡಾ॥ ಎ.ಎಂ. ಶಿವಕುಮಾರ್, ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು. |
| 11. | 545 | ಡಾ॥ ಎಸ್.ಹೆಚ್. ಅಂಗಡಿ, ನಿಯೋಜನೆ ಮೇಲೆ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾಂತರ ಕಲ್ಯಾಣ ಇಲಾಖೆ, ಕೊಪ್ಪಳ. |
| 12. | 547 | ಡಾ॥ ರಮೇಶ, ಪ್ರಧಾನ ಗ್ರಾಮೀಣ ಯೋಜನೆ, ಗೋಣಿಕೊಪ್ಪಲು, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ. |
| 13. | 903 | ಡಾ॥ ಓ.ಎನ್. ರವಿ, ಪಶು ಆಸ್ಪತ್ರೆ, ಹಿರಿಯೂರು, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. |
| 14. | 548 | ಡಾ॥ ಎಸ್.ಎಸ್. ಪಾಟೀಲ್, ಪಶು ಆಸ್ಪತ್ರೆ, ಕಿತ್ತೂರು, ಬಾಗಲಕೋಟೆ ಜಿಲ್ಲೆ. |
| 15. | 549 | ಡಾ॥ ಎನ್.ಕೆ. ಸುಂದರೇಶ್, ಪಶು ಆಸ್ಪತ್ರೆ, ಹಿರೇಹಳ್ಳಿ, ಹಾಸನ ಜಿಲ್ಲೆ. |
| 16. | 550 | ಡಾ॥ ಎಂ. ಈಶ್ವರ್, ಜಿಲ್ಲಾ ಕೋಳಿ ಸಾಕಾಣಿಕೆ ಕೇಂದ್ರ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ. |
| 17. | 551 | ಡಾ॥ ಎಸ್.ಸಿ ಚೌಧರಿ, ಪಶು ಆಸ್ಪತ್ರೆ, ಮುದ್ದೇಬಿಹಾಳ, ಬಿಜಾಪುರ ಜಿಲ್ಲೆ. |
| 18. | 552 | ಡಾ॥ ಸಿ. ಆಂಜನೇಯ ರೆಡ್ಡಿ, ಪಶು ಆಸ್ಪತ್ರೆ, ಯಲ್ಲೋಡು ಗುಡಿಬಂಡೆ ತಾಲ್ಲೂಕು, ಚಿಕ್ಕಬಳ್ಳಾಪುರು ಜಿಲ್ಲೆ. |

| | | |
|---|---|---|
| 19. | 553 | ಡಾ॥ ರತ್ನಾಕರ ಮಲ್ಯ, ಪಶು ಆಸ್ಪತ್ರೆ, ಧರ್ಮಸ್ಥಳ, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. |
| 20. | 905 | ಡಾ॥ ಡಿ.ಸಿ. ಜನಾರ್ಧನ್, ಪಶು ಆಸ್ಪತ್ರೆ, ತೆರಕಣಾಂಬಿ, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ. |
| 21. | 554 | ಡಾ॥ ಆರ್. ಕೋದಂಡರಾಮ, ಪಶು ಆಸ್ಪತ್ರೆ, ಶೀಳನೆರೆ, ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ. |
| 22. | 555 | ಡಾ॥ ಪ್ರಾಣೇಶ್. ಆರ್. ಜಹಗೀರ್‌ದಾರ್, ಜಿಲ್ಲಾ ಕೋಳಿ ಸಾಕಾಣಿಕೆ ಕೇಂದ್ರ, ವಿಜಾಪೂರ. |
| 23. | 556 | ಡಾ॥ ಬಿ.ಎಸ್. ಸುರೇಶ, ಪಶು ಆಸ್ಪತ್ರೆ, ಸೂರತ್ಕಲ್, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. |
| 24. | 558 | ಡಾ॥ ಶ್ರೀನಿವಾಸ. ಎನ್. ಕುಲಕರ್ಣಿ, ಪಶು ಆಸ್ಪತ್ರೆ, ನಿಪ್ಪಾಣಿ, ಬೆಳಗಾವಿ ಜಿಲ್ಲೆ. |
| 25. | 560 | ಡಾ॥ ಜೆ.ಸಿ. ಮಂಜುನಾಥ, ಪಶು ಆಸ್ಪತ್ರೆ, ಹುಲಿಯಾರು, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. |
| 26. | 907 | ಡಾ॥ ಬಿ.ಎಂ. ನಂಜುಂಡಸ್ವಾಮಿ, ಪಶು ಆಸ್ಪತ್ರೆ, ಕ್ಯಾತೇಗೌಡನದೊಡ್ಡಿ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ. |
| 27. | 562 | ಡಾ॥ ಟಿ.ಜಿ. ಪ್ರಸನ್ನಕುಮಾರ್, ಪಶು ಆಸ್ಪತ್ರೆ, ಮುಂಡರಗಿ, ಗದಗ್ ಜಿಲ್ಲೆ. |
| 28. | 563 | ಡಾ॥ ಎ.ಎಲ್. ವಿಜಯಕುಮಾರ್, ಪಶು ಆಸ್ಪತ್ರೆ, ಕಳಸ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. |
| 29. | 564 | ಡಾ॥ ಎಸ್. ಮಹೇಶ್ ಶೆಟ್ಟಿ, ಪಶು ಆಸ್ಪತ್ರೆ, ಬ್ರಹ್ಮಾವರ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ. |
| 30. | 566 | ಡಾ॥ ಡಿ. ನರಸಿಂಹ ರೆಡ್ಡಿ, ರಾಜ್ಯ ಕುಕ್ಕುಟ ಸಾಕಾಣಿಕೆ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು. |
| 31. | 908 | ಡಾ॥ ಹೆಚ್.ಕೆ. ಸಿದ್ದಲಿಂಗಮೂರ್ತಿ, ಪಶು ಆಸ್ಪತ್ರೆ, ಹರವೆ, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಜಿಲ್ಲೆ. |
| 32. | 944 | ಡಾ॥ ಜೆ.ಬಿ. ಕೇಶವಮೂರ್ತಿ, ಪಶು ಆಸ್ಪತ್ರೆ, ಜಗಳೂರು, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ. |
| 33. | 568 | ಡಾ॥ ಮಲ್ಲಿಕಾರ್ಜುನ ಹಂಚಿನಾಳ, ಪಶು ಆಸ್ಪತ್ರೆ, ಬಸವನ ಬಾಗೇವಾಡಿ, ಬಸವನ ಬಾಗೇವಾಡಿ ತಾಲ್ಲೂಕು, ಬಿಜಾಪುರ ಜಿಲ್ಲೆ. |
| 34. | 569 | ಡಾ॥ ಪ್ರಮೋದ್ ಕುಲಕರ್ಣಿ, ಪಶು ಆಸ್ಪತ್ರೆ, ಚಿಟಗುಪ್ಪ, ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ. |
| 35. | 570 | ಡಾ॥ ಸೂರ್ಯನಾರಾಯಣ, ಪಶು ಆಸ್ಪತ್ರೆ, ಕುಂದಾಪುರ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. |
| 36. | 571 | ಡಾ॥ ನವೀನ್ ಜವಳಿ, ಪಶು ಆಸ್ಪತ್ರೆ, ಅನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 37. | 910 | ಡಾ॥ ಎ.ಎನ್. ಸಿದ್ದಯ್ಯ, ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಇಲಾಖೆ, ರಾಮನಗರ, ರಾಮನಗರ ಜಿಲ್ಲೆ. |
| 38. | 573 | ಡಾ॥ ಎನ್.ಹೆಚ್. ಶ್ರೀಪಾದರಾವ್, ಪಶು ಆಸ್ಪತ್ರೆ, ತ್ಯಾಗರ್ತಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 39. | 574 | ಡಾ॥ ಚಂದ್ರಶೇಖರ ಗಣಪ ಗೌಡ, ಪಶು ಆಸ್ಪತ್ರೆ, ಗೋಕರ್ಣ, ಕುಮಟಾ ತಾಲ್ಲೂಕು, ಉಡುಪಿ ಜಿಲ್ಲೆ. |
| 40. | 575 | ಡಾ॥ ಪಿ. ಸುರೇಶ್ ಭಟ್, ವೀರ್ಯ ಸಂಕಲನಾ ಕೇಂದ್ರ, ಕೊಯಿಲಾ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. |
| 41. | 577 | ಡಾ॥ ಹೆಚ್.ಎಸ್. ರಂಗಸ್ವಾಮಿ, ಪಶು ಆಸ್ಪತ್ರೆ, ಸೊರಬ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 42. | 911 | ಡಾ॥ ಶಂಕರ ಗುಳೇದಗುಡ್ಡ, ಪಶು ಆಸ್ಪತ್ರೆ, ಮಾನ್ವಿ, ಮಾನ್ವಿ ತಾಲ್ಲೂಕು, ರಾಯಚೂರು ಜಿಲ್ಲೆ. |
| 43. | 578 | ಡಾ॥ ಬಿ.ಆರ್. ಚಂದ್ರಶೇಖರ್, ದೊಡ್ಡರೋಗ ನಿವಾರಣಾ ಯೋಜನೆ, ವಿಜಾಪೂರ, ವಿಜಾಪೂರ ಜಿಲ್ಲೆ. |
| 44. | 579 | ಡಾ॥ ಗುರುರಾಜ್. ಪಿ. ಮನಗೂಳಿ, ಪಶು ಆಸ್ಪತ್ರೆ, ಖಾನಪೂರ, ಬೆಳಗಾವಿ ಜಿಲ್ಲೆ. |
| 45. | 581 | ಡಾ॥ ರಾಮಕೃಷ್ಣ ಹೆಗಡೆ, ಪಶು ಆಸ್ಪತ್ರೆ, ಅಕ್ಕಿ ಆಲೂರು, ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆ. |
| 46. | 582 | ಡಾ॥ ಹೆಚ್. ರಾಜು, ಪಶು ಆಸ್ಪತ್ರೆ, ಶಿರಾಳಕೊಪ್ಪ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ. |
| 47. | 585 | ಡಾ॥ ಜಿ.ಎಸ್. ರಮಾನಂದ, ಪಶು ಆಸ್ಪತ್ರೆ, ಮುಳಬಾಗಿಲು, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ. |
| 48. | 923 | ಡಾ॥ ಬಸವರಾಜ್. ಡಿ. ಚಲವಾದಿ, ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಇಲಾಖೆ, ಹಾವೇರಿ, ಹಾವೇರಿ ಜಿಲ್ಲೆ. |
| 49. | 586 | ಡಾ॥ ಜಿ.ಎಂ. ಕೊಟ್ರೇಶಪ್ಪ, ದೊಡ್ಡರೋಗ ನಿವಾರಣಾ ಯೋಜನೆ, ಚಿಕ್ಕಮಗಳೂರು, ಚಿಕ್ಕಮಗಳೂರು ಜಿಲ್ಲೆ. |
| 50. | 587 | ಡಾ॥ ಆರ್. ಮಂಜುನಾಥ್, ಪಶು ಆಸ್ಪತ್ರೆ, ಸಿದ್ದರಾಮನ ಹುಂಡಿ, ಮೈಸೂರು ತಾಲ್ಲೂಕು, ಮೈಸೂರು ಜಿಲ್ಲೆ. |
| 51. | 589 | ಡಾ॥ ಆರ್. ವೇಣುಗೋಪಾಲ್, ಪಶು ಆಸ್ಪತ್ರೆ, ದಾಂಡೇಲಿ, ಹಳಿಯಾಳ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. |
| 52. | 590 | ಡಾ॥ ರಾಘವೇಂದ್ರ. ಎ. ಕುಲಕರ್ಣಿ, ಪಶು ಆಸ್ಪತ್ರೆ, ಮಹಾಲಿಂಗಪುರ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 53. | 592 | ಡಾ॥ ಡಿ.ಟಿ. ಜಯರಾಮಯ್ಯ, ನಗರ ಪಶು ಆಸ್ಪತ್ರೆ, ಚಾಮರಾಜಪೇಟೆ, ಮೈಸೂರು ರಸ್ತೆ, ಬೆಂಗಳೂರು. |
| 54. | 924 | ಡಾ॥ ಚನ್ನಬಸಪ್ಪ, ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಧಾರವಾಡ, ಧಾರವಾಡ ಜಿಲ್ಲೆ. |
| 55. | 593 | ಡಾ॥ ಜಿ. ಬಸವರಾಜು, ನಿಯೋಜನೆ ಮೇರೆಗೆ ಬೀದಿ ನಾಯಿಗಳ ನಿಯಂತ್ರಣ ಯೋಜನೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು. |
| 56. | 594 | ಡಾ॥ ತಿರುಮಲೇಗೌಡ, ಪಶು ಆಸ್ಪತ್ರೆ, ಹುರಾ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ |
| 57. | 595 | ಡಾ॥ ಅರವಿಂದ ಎಸ್. ಸರಾಫ್, ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಇಲಾಖೆ, ಗದಗ್, ಗದಗ್ ಜಿಲ್ಲೆ. |
| 58. | 596 | ಡಾ॥ ಎಲ್. ವರದರಾಜ ಕುಮಾರ್, ರಾಜ್ಯ ಕುಕ್ಕುಟ ಸಾಕಾಣಿಕೆ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು. |
| 59. | 597 | ಡಾ॥ ಎ.ಎಸ್. ರಾಮಚಂದ್ರ, ಪಶು ಆಸ್ಪತ್ರೆ, ಹಿತ್ತಲ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 60. | 598 | ಡಾ॥ ಕೆ.ವಿ. ಗುರುದತ್, ನಿಯೋಜನೆ ಮೇಲೆ ಆಪ್ತ ಕಾರ್ಯದರ್ಶಿ, ಉಪ ಸಭಾಧ್ಯಕ್ಷರು, ಕರ್ನಾಟಕ ವಿಧಾನಸಭೆ, ಬೆಂಗಳೂರು. |
| 61. | 990 | ಡಾ॥ ಗೋವಿಂದ ಭೀಮಣ್ಣ ಹರಿಜನ, ಪಶು ಆಸ್ಪತ್ರೆ, ಹುಮ್ನಾಬಾದ್, ಬೀದರ್ ಜಿಲ್ಲೆ. |
| 62. | 1127 | ಡಾ॥ ಸತ್ಯನಾರಾಯಣ, ಪಶು ಆಸ್ಪತ್ರೆ, ಸೋಮಯಾಜಲಪಲ್ಲಿ, ಕೋಲಾರ ಜಿಲ್ಲೆ. |

| | | |
|---|---|---|
| 63. | 599 | ಡಾ॥ ಹೆಚ್.ಸಿ. ಜಯರಾಮು, ಪಶು ಆಸ್ಪತ್ರೆ, ಕೈಲಂಚ, ರಾಮನಗರ ತಾಲ್ಲೂಕು, ರಾಮನಗರ ಜಿಲ್ಲೆ. |
| 64. | 600 | ಡಾ॥ ಗೋಪಿನಾಥ, ಪಶು ಆಸ್ಪತ್ರೆ, ಹಿರೇಕೆರೂರು, ಹಾವೇರಿ ತಾಲ್ಲೂಕು, ಹಾವೇರಿ ಜಿಲ್ಲೆ. |
| 65. | 601 | ಡಾ॥ ಹೆಚ್.ಬಿ. ವಿಶ್ವಮೂರ್ತಿ, ರಾಜ್ಯ ಕುಕ್ಕುಟ ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು. |
| 66. | 602 | ಡಾ॥ ಹೆಚ್.ಆರ್. ಗಾಯತ್ರಿ, ಉಪ ನಿರ್ದೇಶಕರ ಕಛೇರಿ, ದೊಡ್ಡರೋಗ ನಿವಾರಣಾ ಯೋಜನೆ, ಹೆಬ್ಬಾಳ, ಬೆಂಗಳೂರು. |
| 67. | 995 | ಡಾ॥ ಟಿ.ಎ. ದೇವರಾಜು, ಪಶು ಆಸ್ಪತ್ರೆ, ಹುಲಿಯೂರು ದುರ್ಗ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ. |
| 68. | 603 | ಡಾ॥ ಎ. ಪರಮೇಶ್ವರಪ್ಪ, ಪಶು ಆಸ್ಪತ್ರೆ, ನಾಗಮಂಗಲ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ. |
| 69. | 604 | ಡಾ॥ ಎಲ್. ಕಾಂತರಾಜು, ಪಶು ಆಸ್ಪತ್ರೆ, ಮಲ್ಲೇಶ್ವರಂ, ಬೆಂಗಳೂರು |
| 70. | 605 | ಡಾ॥ ನಾಗರಾಜು, ಪಶು ಆಸ್ಪತ್ರೆ, ಹಲುವಾಗಿಲು, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ. |
| 71. | 606 | ಡಾ॥ ಎಂ.ಸಿ. ಶಿವಾನಂದ, ಪಶು ಆಸ್ಪತ್ರೆ, ಚಿಕ್ಕನಾಯಕನಹಳ್ಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. |
| 72. | 607 | ಡಾ॥ ಸಿ. ಸುರೇಶ್ ಕುಮಾರ್, ನಿಯೋಜನೆ ಮೇಲೆ ಶ್ರೀ ಚಾಮರಾಜೇಂದ್ರ ಮೃಗಾಲಯ, ಮೈಸೂರು. |
| 73. | 608 | ಡಾ॥ ಟಿ. ವೆಂಕಾರೆಡ್ಡಿ, ಪಶು ಆಸ್ಪತ್ರೆ, ಕೊಣನೂರು, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ. |
| 74. | 1031 | ಡಾ॥ ಎಂ.ಡಿ. ಪ್ರದೀಪ್, ಪಶು ಆಸ್ಪತ್ರೆ, ನರಸಿಂಹರಾಜಪುರು, ನರಸಿಂಹರಾಜಪುರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. |
| 75. | 609 | ಡಾ॥ ಎನ್.ಎ. ಮಧುರನಾಥ ರೆಡ್ಡಿ, ಪಶು ಆಸ್ಪತ್ರೆ, ಚಿಕ್ಕಬಳ್ಳಾಪುರ, ಚಿಕ್ಕಬಳ್ಳಾಪುರ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ. |
| 76. | 610 | ಡಾ॥ ಟಿ.ಟಿ. ಲಕ್ಷ್ಮಿನಾರಾಯಣ ಪಟೇಲ್, ಪಶು ಆಸ್ಪತ್ರೆ, ತಾವರೆಕೆರೆ, ಶಿರಾ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 77. | 612 | ಡಾ॥ ಡಿ. ಕೃಷ್ಣೇಗೌಡ, ನಿಯೋಜನೆ ಮೇರೆಗೆ ಬೀದಿ ನಾಯಿಗಳ ನಿಯಂತ್ರಣ ಯೋಜನೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು. |
| 78. | 613 | ಡಾ॥ ಎಂ.ಬಿ. ಪಾಟೀಲ್, ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಇಲಾಖೆ, ಬಾಗಲಕೋಟೆ, ಬಾಗಲಕೋಟೆ ಜಿಲ್ಲೆ. |
| 79. | 615 | ಡಾ॥ ಬಸೆಟೆಪ್ಪಾ ಪಾಟೀಲ್, ಜಿಲ್ಲಾ ಕೋಳಿ ಸಾಕಾಣಿಕೆ ಮತ್ತು ತರಬೇತಿ ಕೇಂದ್ರ ಗುಲ್ಬರ್ಗಾ, ಗುಲ್ಬರ್ಗಾ ಜಿಲ್ಲೆ. |
| 80. | 617 | ಡಾ॥ ಎ.ಜಿ. ಪಾಟೀಲ್, ಪಶು ಆಸ್ಪತ್ರೆ, ಜಮಖಂಡಿ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 81. | 1054 | ಡಾ॥ ಜಯರಾಂ. ವ್ಹಿ. ಚವ್ಹಾಣ್, ಪಶು ಆಸ್ಪತ್ರೆ, ಕುಷ್ಟಗಿ, ಕೊಪ್ಪಳ ತಾಲ್ಲೂಕು, ಕೊಪ್ಪಳ ಜಿಲ್ಲೆ. |
| 82. | 618 | ಡಾ॥ ಜಂಬುನಾಥ. ಆರ್. ಗದ್ದಿ, ಪಶು ಆಸ್ಪತ್ರೆ, ಅಳ್ನಾವರ, ಧಾರವಾಡ ತಾಲ್ಲೂಕು, ಧಾರವಾಡ ಜಿಲ್ಲೆ. |
| 83. | 620 | ಡಾ॥ ಹೆಚ್.ವಿ. ರಾಜಶೇಖರ ರೆಡ್ಡಿ, ಪಶು ಆಸ್ಪತ್ರೆ, ದೊಡ್ಡಮರಳವಾಡಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ. |
| 84. | 621 | ಡಾ॥ ಬಿ.ವಿ. ಮೂಲ್ಕಿ ಪಾಟೀಲ್, ಪಶು ಆಸ್ಪತ್ರೆ, ಶಿಗ್ಗಾಂವ್, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ. |
| 85 | 622 | ಡಾ॥ ಟಿ.ಹೆಚ್. ಶಂಕರಪ್ಪ, ಜಿಲ್ಲಾ ಕೋಳಿ ಸಾಕಾಣಿಕೆ ಮತ್ತು ತರಬೇತಿ ಕೇಂದ್ರ, ದಾವಣಗೆರೆ, ದಾವಣಗೆರೆ ಜಿಲ್ಲೆ. |
| 86. | 623 | ಡಾ॥ ಎಸ್.ಕೆ. ನಾಗರಾಜಪ್ಪ, ಪಶು ಆಸ್ಪತ್ರೆ, ಪಂಚನಹಳ್ಳಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. |
| 87. | 1066 | ಡಾ॥ ಡಿ. ಮೋಹನ್, ನಿಯೋಜನೆ ಮೇಲೆ ಕಾರ್ಯನಿರ್ವಾಹಕ ಅಧಿಕಾರಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್, ಇಲಾಖೆ |
| 88. | 625 | ಡಾ॥ ಹೆಚ್.ಎಂ. ಸುಭಾಷ್, ಪಶು ಆಸ್ಪತ್ರೆ, ಕೆ.ಜಿ. ಕೊಪ್ಪಲು, ಮೈಸೂರು ಜಿಲ್ಲೆ. |
| 89. | 627 | ಡಾ॥ ಟಿ. ವಿಶ್ವನಾಥ, ಪಶು ಆಸ್ಪತ್ರೆ, ಹಡಗಲಿ, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ. |
| 90. | 633 | ಡಾ॥ ಎನ್.ಎಸ್. ಜಯಪ್ರಕಾಶ್, ಪಶು ಆಸ್ಪತ್ರೆ, ಹೊಳೆಹೊನ್ನೂರು, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 91. | 1103 | ಡಾ॥ ಬಿ. ರವೀಂದ್ರ, ಪಶು ಆಸ್ಪತ್ರೆ, ಕೀಲಾರ, ಮಂಡ್ಯ ತಾಲ್ಲೂಕು, ಮಂಡ್ಯ ಜಿಲ್ಲೆ. |
| 92. | 1256 | ಡಾ॥ ಪರಮೇಶ್. ಎನ್. ಹುಬ್ಬಳ್ಳಿ, ಪಶು ಆಸ್ಪತ್ರೆ, ರಾಣೀಬೆನ್ನೂರು, ರಾಣೀಬೆನ್ನೂರು ತಾಲ್ಲೂಕು, ಹಾವೇರಿ ಜಿಲ್ಲೆ. |
| 93. | 635 | ಡಾ॥ ಕೆ.ಎಂ. ಚನ್ನಕೇಶವಮೂರ್ತಿ, ರಾಜ್ಯ ಜಾನುವಾರು ಮತ್ತು ತರಬೇತಿ ಕೇಂದ್ರ ಹೆಸರಘಟ್ಟ, ಬೆಂಗಳೂರು. |
| 94. | 636 | ಡಾ॥ ಎಸ್.ಆರ್. ತಿಮ್ಮರಾಜು, ಪಶು ಆಸ್ಪತ್ರೆ, ಕೋಡ, ಹಿರೇಕೆರೂರು ತಾಲ್ಲೂಕು, ಹಾವೇರಿ ಜಿಲ್ಲೆ. |
| 95. | 639 | ಡಾ॥ ಕೆ.ಪಿ. ರಮೇಶ್, ನಿಯೋಜನೆ ಮೇರೆಗೆ ಬೀದಿ ನಾಯಿಗಳ ನಿಯಂತ್ರಣ ಯೋಜನೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು. |
| 96. | 640 | ಡಾ॥ ಹೆಚ್. ಶ್ರೀರಂಗನಾಥ, ಪಶು ಆಸ್ಪತ್ರೆ, ಜಾವಗಲ್, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ. |
| 97. | 1114 | ಡಾ॥ ರಾಮುಮಾಪ ಸಿಂಗ್ ರಾಥೋಡ್, ಪಶು ಆಸ್ಪತ್ರೆ, ಬಿಜಾಪುರ, ಬಿಜಾಪುರ ತಾಲ್ಲೂಕು, ಬಿಜಾಪುರ ಜಿಲ್ಲೆ. |
| 98. | 641 | ಡಾ॥ ಹೆಚ್.ಆರ್. ಜಗದೀಶ್, ದೊಡ್ಡರೋಗ ನಿವಾರಣಾ ಯೋಜನೆ, ಮೈಸೂರು, ಮೈಸೂರು ಜಿಲ್ಲೆ. |
| 99. | 643 | ಡಾ॥ ಟಿ.ವಿ. ಜನಾರ್ಧನ್, ಪಶು ಆಸ್ಪತ್ರೆ, ದೊಡ್ಡಬಳ್ಳಾಪುರ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| 100. | 644 | ಡಾ॥ ಟಿ. ರಾಜೇಂದ್ರನ್, ಪಶು ಆಸ್ಪತ್ರೆ, ಕೋಲಾರ, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ. |
| 101. | 647 | ಡಾ॥ ಸ್ಯೆಯದ್ ಖಾದರ್ ಭಾಷಾ, ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಇಲಾಖೆ, ರಾಮನಗರ, ರಾಮನಗರ ಜಿಲ್ಲೆ. |
| 102. | 651 | ಡಾ॥ ಎ. ಗುರುಮೂರ್ತಿ, ದೊಡ್ಡರೋಗ ನಿವಾರಣಾ ಯೋಜನೆ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ. |
| 103. | 1124 | ಡಾ॥ ಮಾರುತಿ ಉಮಲಾ ನಾಯಕ, ಕರ್ನಾಟಕ ಸಹಕಾರಿ ಕುಕ್ಕಟ ಮಹಾಮಂಡಳಿ, ಗುಲ್ಬರ್ಗಾ, ಗುಲ್ಬರ್ಗಾ ಜಿಲ್ಲೆ. |
| 104. | 653 | ಡಾ॥ ಬಿ.ಪಿ. ತಿಮ್ಮಪ್ಪ, ಪಶು ಆಸ್ಪತ್ರೆ, ಮಳವಳ್ಳಿ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ. |
| 105. | 654 | ಡಾ॥ ಎನ್.ಎಸ್. ಶರತ್ ಕುಮಾರ್, ಪಶು ಆಸ್ಪತ್ರೆ, ನರೇಗಲ್ ರೋಣ ತಾಲ್ಲೂಕು, ಗದಗ್ ಜಿಲ್ಲೆ. |

| | | |
|---|---|---|
| 106. | 655 | ಡಾ॥ ಎಂ.ಪಿ. ಶಶಿಕುಮಾರ್, ಪಶುಪರೀಕ್ಷಕರ ತರಬೇತಿ ಕೇಂದ್ರ, ತುಮಕೂರು, ತುಮಕೂರು ಜಿಲ್ಲೆ. |
| 107. | 656 | ಡಾ॥ ಎನ್. ಮೋಹನ್, ಪಶು ಆಸ್ಪತ್ರೆ, ಕೋಟಾ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ. |
| 108. | 657 | ಡಾ॥ ಮನೋಹರ. ವಿ. ಔರಸಂಗ, ಪಶು ಆಸ್ಪತ್ರೆ, ಬಬಲೇಶ್ವರ, ಬಿಜಾಪುರ ತಾಲ್ಲೂಕು, ಬಿಜಾಪುರ ಜಿಲ್ಲೆ. |
| 109. | 658 | ಡಾ॥ ಕೆ. ಉದಯಕುಮಾರ್, ಪಶು ಆಸ್ಪತ್ರೆ, ಬಸರಾಳು, ಮಂಡ್ಯ ತಾಲ್ಲೂಕು, ಮಂಡ್ಯ ಜಿಲ್ಲೆ. |
| 110. | 1139 | ಡಾ॥ ಮಲ್ಲಿಕಾರ್ಜುನ ಕಟ್ಟಿಮನಿ, ಪಶು ಆಸ್ಪತ್ರೆ, ಚಿತ್ತಾಪೂರ, ಚಿತ್ತಾಪೂರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 111. | 660 | ಡಾ॥ ಬಿ.ಹೆಚ್. ರಮೇಶ್, ಬೀದಿ ನಾಯಿಗಳ ನಿಯಂತ್ರಣ ಯೋಜನೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು (ನಿಯೋಜನೆ ಮೇರೆಗೆ) |
| 112. | 661 | ಡಾ॥ ಎನ್. ರಮೇಶ್ ರಾವ್, ಉಪ ನಿರ್ದೇಶಕರ ಕಛೇರಿ, ದೊಡ್ಡರೋಗ ನಿವಾರಣಾ ಯೋಜನೆ, ಹೆಬ್ಬಾಳ, ಬೆಂಗಳೂರು. |
| 113. | 662 | ಡಾ॥ ಹೆಚ್.ಪಿ. ಜಾನಕಿ, ಪಶುವೈದ್ಯಕೀಯ ಪರೀಕ್ಷಕರ ತರಬೇತಿ, ಕೇಂದ್ರ, ಹಾಸನ, ಹಾಸನ ಜಿಲ್ಲೆ. |
| 114. | 663 | ಡಾ॥ ಎಸ್. ನಟರಾಜು, ಪಶು ಆಸ್ಪತ್ರೆ, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ. |
| 115. | 1140 | ಡಾ॥ ಜಿ.ಎನ್. ನಾಗರಾಜು, ಪಶು ಆಸ್ಪತ್ರೆ, ಹರವೆ, ಚಾಮರಾಜನಗರ ಜಿಲ್ಲೆ. (ಪ್ರಸ್ತುತ ಪಿ.ಹೆಚ್.ಡಿ. ಉನ್ನತ ಶಿಕ್ಷಣ ಮೇಲೆ ಪಶುವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿಗೆ ನಿಯೋಜಿಸಿದೆ) |
| 116 | 1141 | ಡಾ॥ ಎಸ್. ಸುರೇಶ್, ನಿಯೋಜನೆ ಮೇರೆಗೆ ಬೀದಿ ನಾಯಿಗಳ ನಿಯಂತ್ರಣ ಯೋಜನೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು. |
| 117. | 664 | ಡಾ॥ ಸುಧಾದೇವರೆಡ್ಡಿ, ವಿಶೇಷ ಜಾನುವಾರು ತಳಿ ಅಭಿವೃದ್ಧಿ ಯೋಜನೆ, ಬೆಳಗಾವಿ, ಬೆಳಗಾವಿ ಜಿಲ್ಲೆ. |
| 118. | 665 | ಡಾ॥ ಎಂ.ಬಿ. ಉದಯಕುಮಾರ್, ಪಶು ಆಸ್ಪತ್ರೆ, ಕದಬಳ್ಳಿ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ. |
| 119. | 667 | ಡಾ॥ ಶಶಿಧರ್ ನಾಡಗೌಡ, ಪಶು ಆಸ್ಪತ್ರೆ, ಬೆಳಗಾವಿ, ಬೆಳಗಾವಿ ತಾಲ್ಲೂಕು, ಬೆಳಗಾವಿ ಜಿಲ್ಲೆ. |
| 120. | 668 | ಡಾ॥ ಉಮೇಶ್. ಎನ್. ಕೊಂಡಿ, ಪಶು ಆಸ್ಪತ್ರೆ, ಅಣ್ಣಿಗೇರಿ, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ. |
| 121. | 670 | ಡಾ॥ ಸುಬ್ರಹ್ಮಣ್ಯ ಹೆಚ್. ಪ್ರಸಾದ್, ಜಿಲ್ಲಾ ಕೋಳಿ ಸಾಕಾಣಿಕೆ ಕೇಂದ್ರ, ಕೂಡಿಗೆ, ಕೊಡಗು ಜಿಲ್ಲೆ. |
| 122. | 1142 | ಡಾ॥ ಹೆಚ್. ರಂಗಪ್ಪ, ಪಶು ಆಸ್ಪತ್ರೆ, ಜೇವರ್ಗಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 123. | 1295 | ಡಾ॥ ಟಿ.ಎಸ್. ಮಂಜಪ್ಪ, ಪಶು ಆಸ್ಪತ್ರೆ, ಕಾರವಾರ, ಉತ್ತರ ಕನ್ನಡ ಜಿಲ್ಲೆ. |
| 124. | 672 | ಡಾ॥ ಸತೀಶ್. ವಿ. ಆರ್., ದೊಡ್ಡರೋಗ ನಿವಾರಣಾ ಯೋಜನೆ, ಮಡಿಕೇರಿ, ಕೊಡಗು ಜಿಲ್ಲೆ. |
| 125. | 673 | ಡಾ॥ ಐಗಳಿ ಭುಜಬಲಿ, ದೊಡ್ಡರೋಗ ಜಾಗೃತ ಘಟಕ, ಕಾಗವಾಡ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ. |
| 126. | 674 | ಡಾ॥ ನಾಗರಾಜ್, ಜಿ.ಎಂ. ಪಶು ಆಸ್ಪತ್ರೆ, ಶಿರಾ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ. |
| 127. | 1146 | ಡಾ॥ ಕೆ.ಎಂ. ಶಿವಕುಮಾರ್, ಪಶು ಆಸ್ಪತ್ರೆ, ಆಳಂದ, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 128. | 678 | ಡಾ॥ ಎಂ.ಟಿ. ತಿಮ್ಮಯ್ಯ, ಪಶು ಆಸ್ಪತ್ರೆ, ಉತ್ತರಹಳ್ಳಿ, ಬೆಂಗಳೂರು ನಗರ ಜಿಲ್ಲೆ. |
| 129. | 679 | ಡಾ॥ ಶೇಖರಪ್ಪ ಡಿ. ಚಿಕ್ಕೇನಕೊಪ್ಪ, ಪಶು ಆಸ್ಪತ್ರೆ, ನವಲಗುಂದ, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ. |
| 130. | 680 | ಡಾ॥ ಬಿ.ಎನ್. ಷಡಾಕ್ಷರಮೂರ್ತಿ, ನಿಯೋಜನೆ ಮೇಲೆ ಕಾರ್ಯನಿರ್ವಾಹಕ ಅಧಿಕಾರಿ, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಜಿಲ್ಲೆ. |
| 131. | 681 | ಡಾ॥ ಸಿ.ಡಿ. ಹನುಮಂತಪ್ಪ, ಪಶು ಆಸ್ಪತ್ರೆ, ಗುತ್ತಲ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 132. | 682 | ಡಾ॥ ಎಂ.ಎಸ್. ವೆಂಕಟೇಶ್, ಪಶು ಆಸ್ಪತ್ರೆ, ಬೇಲೂರು, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ. |
| 133. | 1151 | ಡಾ॥ ಜಿ. ಸಂಜೀವರಾಯ, ಪಶು ಆಸ್ಪತ್ರೆ, ಮಧುಗಿರಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. |
| 134. | 683 | ಡಾ॥ ಎಂ. ನಾಗೇಶಪ್ಪ, ನಿಯೋಜನೆ ಮೇಲೆ ಬೀದಿ ನಾಯಿಗಳ ನಿಯಂತ್ರಣ ಯೋಜನೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು. |
| 135. | 684 | ಡಾ॥ ಚಂದ್ರಶೇಖರ್. ಎಸ್. ಸುಂಕದ, ನಿಯೋಜನೆ ಮೇರೆಗೆ ಹುಲಿ ಮತ್ತು ಸಿಂಹ ಧಾಮ, ತ್ಯಾವರೆಕೊಪ್ಪ, ಶಿವಮೊಗ್ಗ. |
| 136. | 686 | ಡಾ॥ ದತ್ತಾತ್ರೇಯ. ವೆಂ. ಶೆಟ್ಟಿ, ಪಶು ಆಸ್ಪತ್ರೆ, ಕುರುಗೊಡು, ಬಳ್ಳಾರಿ ತಾಲ್ಲೂಕು, ಬಳ್ಳಾರಿ ಜಿಲ್ಲೆ. |
| 137. | 688 | ಡಾ॥ ಎಂ.ಎನ್. ಸುರೇಶ್, ಪಶು ಆಸ್ಪತ್ರೆ, ಸುಬ್ರಹ್ಮಣ್ಯ, ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. |
| 138. | 690 | ಡಾ॥ ಎಂ.ವಿ. ಕೃಷ್ಣಾರೆಡ್ಡಿ, ನಿಯೋಜನೆ ಮೇಲೆ ಜಲಾನಯನ ಇಲಾಖೆ, ಬೆಂಗಳೂರು. |
| 139. | 1154 | ಡಾ॥ ಶಶಿಕಾಂತ್ ಎಸ್. ಬೂದಿಹಾಳ, ಪಶು ಆಸ್ಪತ್ರೆ, ಸವದತ್ತಿ, ಸವದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ. |
| 140. | 691 | ಡಾ॥ ಆಲಿಜಾನ್ ಸಾಹೇಬ್, ಪಶು ಆಸ್ಪತ್ರೆ, ಕೂಟಗಲ್, ರಾಮನಗರ ತಾಲ್ಲೂಕು, ರಾಮನಗರ ಜಿಲ್ಲೆ. |
| 141. | 692 | ಡಾ॥ ಸುಬ್ರಮಣ್ಯ ಹೆಗಡೆ. ಎಸ್., ಪಶು ಆಸ್ಪತ್ರೆ,, ಬೀಳಗಿ ಬಾಗಲಕೋಟೆ ಜಿಲ್ಲೆ. |
| 142. | 693 | ಡಾ॥ ಕೆ. ಶಂಕರ ಶೆಟ್ಟಿ, ವಿಶೇಷ ಜಾನುವಾರು ತಳಿ ಅಭಿವೃದ್ಧಿ, ಯೋಜನೆ, ಬೀದರ್, ಬೀದರ್ ಜಿಲ್ಲೆ. |
| 143. | 694 | ಡಾ॥ ಜಿ.ವಿ. ಜಯಣ್ಣ, ಪಶು ಆಸ್ಪತ್ರೆ, ಬ್ಯಾಡಗಿ, ಹಾವೇರಿ ಜಿಲ್ಲೆ. |
| 144. | 695 | ಡಾ॥ ಮುನಿನಾರಾಯಣ ರೆಡ್ಡಿ.ಹೆಚ್.ವಿ., ಪಶು ಆಸ್ಪತ್ರೆ, ಶಿಡ್ಲಘಟ್ಟ, ಚಿಕ್ಕಬಳ್ಳಾಪುರ ಜಿಲ್ಲೆ. |
| 145. | 1191 | ಡಾ॥ ಎ. ಸಹದೇವ, ನಿಯೋಜನೆ ಮೇರೆಗೆ ಬೀದಿ ನಾಯಿಗಳ ನಿಯಂತ್ರಣ ಯೋಜನೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು |
| 146. | 697 | ಡಾ॥ ವೀರೇಶ್ ಟಿ.ಆರ್., ಪಶು ಆಸ್ಪತ್ರೆ, ಹರಿಹರ, ಹರಿಹರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |

| | | |
|---|---|---|
| 147. | 700 | ಡಾ॥ ಎಸ್.ಸಿ. ಸುರೇಶ್, ನಗರ ಪಶು ಆಸ್ಪತ್ರೆ, ಧನ್ವಂತರಿ ರಸ್ತೆ, ಮೈಸೂರು. |
| 148. | 701 | ಡಾ॥ ಕೆ. ಚಿದಾನಂದ, ಪಶು ಆಸ್ಪತ್ರೆ, ಹುಣಸಗಿ, ಸುರಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 149. | 703 | ಡಾ॥ ಶಂಕರ ಗೌಡ ಪಾಟೀಲ್, ಪಶು ಆಸ್ಪತ್ರೆ, ಚಿಕ್ಕೋಡಿ, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ. |
| 150. | 705 | ಡಾ॥ ಸಂಗಣ್ಣ. ಪಿ. ಕುಂಬಾರ, ಪಶು ಆಸ್ಪತ್ರೆ, ಬನಹಟ್ಟಿ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 151. | 706 | ಡಾ॥ ಕಲ್ಲಪ್ಪ. ಎಸ್., ಪಶು ಆಸ್ಪತ್ರೆ, ಶಿವಮೊಗ್ಗ, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 152. | 1196 | ಡಾ॥ ವಿ. ವೆಂಕಟೇಶ, ಪಶು ಆಸ್ಪತ್ರೆ, ಬಾಗೇಪಲ್ಲಿ, ಬಾಗೇಪಲ್ಲಿ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ. |
| 153. | 709 | ಡಾ॥ ರಾಘವೇಂದ್ರ ಪುರೋಹಿತ್, ಪಶು ಆಸ್ಪತ್ರೆ, ಮೂಡಲಗಿ, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ. |
| 154. | 710 | ಡಾ॥ ಎಸ್.ಪಿ. ಅನಚಿತ್, ಪಶು ಆಸ್ಪತ್ರೆ, ಯಲಬುರ್ಗಾ, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ. |
| 155. | 712 | ಡಾ॥ ಮನೋಹರ್. ಡಿ. ಕಬ್ಬೂರು, ಪಶು ಆಸ್ಪತ್ರೆ, ಗೋಕಾಕ್, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ. |
| 156. | 713 | ಡಾ॥ ಕೆ.ಹೆಚ್. ಧರ್ಮಪ್ಪ, ಪಶು ಆಸ್ಪತ್ರೆ, ಆಲೂರು, ಆಲೂರು ತಾಲ್ಲೂಕು, ಹಾಸನ ಜಿಲ್ಲೆ. |
| 157. | 1244 | ಡಾ॥ ಕೆ.ಆರ್. ಹೊಸಮನಿ, ಪಶು ಆಸ್ಪತ್ರೆ, ಕ್ಷ–ಕಿರಣ ಘಟಕ, ಹುಬ್ಬಳ್ಳಿ, ಧಾರವಾಡ ಜಿಲ್ಲೆ. |
| 158. | 717 | ಡಾ॥ ಎಂ.ಎಸ್. ಹರೀಶ್, ಪಶು ಆಸ್ಪತ್ರೆ, ಕುಕನೂರು, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ. |
| 159. | 718 | ಡಾ॥ ಜಿ.ಎಂ. ಹನುಮಪ್ಪ, ಪಶು ಆಸ್ಪತ್ರೆ, ಪಾವಗಡ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. |
| 160. | 719 | ಡಾ॥ ರಾಕೇಶ್. ಎಸ್. ಬಂಗ್ಲೆ, ದೊಡ್ಡರೋಗ ನಿವಾರಣಾ ಯೋಜನೆ, ಧಾರವಾಡ. |
| 161. | 723 | ಡಾ॥ ಎ.ಎಲ್. ನಾಗರಾಜಯ್ಯ, ಪಶು ಆಸ್ಪತ್ರೆ, ಭಾಲ್ಕಿ, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ. |
| 162. | 726 | ಡಾ॥ ಹೆಚ್.ವೈ ಹರೀಶ್, ಪಶು ಆಸ್ಪತ್ರೆ, ರಾಯಭಾಗ್, ಬೆಳಗಾವಿ ಜಿಲ್ಲೆ. |
| 163. | 730 | ಡಾ॥ ಎಸ್.ಸಿ. ಶ್ರೀಧರಮೂರ್ತಿ, ಪಶು ಆಸ್ಪತ್ರೆ, ನೆಲಮಂಗಲ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. |

ಸ್ವತಂತ್ರ ಪ್ರಭಾರದಲ್ಲಿ ಮುಂದುವರೆಯುತ್ತಿರುವ ಮೇಲ್ಕಂಡ ಪಶುವೈದ್ಯಾಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 68ರನ್ವಯ 6 ತಿಂಗಳಿಗೂ ಮೀರಿ ಪ್ರಭಾರ ಭತ್ಯೆ ಪಡೆಯಲು ಮತ್ತು ಸ್ವತಂತ್ರ ಪ್ರಭಾರದ ಅವಧಿ ಮುಕ್ತಾಯಗೊಂಡ ನಂತರವೂ ಪ್ರಭಾರ ಭತ್ಯೆಯನ್ನು ಪಡೆಯಲು ಇಲಾಖಾ ಆಯುಕ್ತರು ಮಂಜೂರಾತಿ ನೀಡಿರುವ ಕ್ರಮಕ್ಕೆ ಘಟನೋತ್ತರ ಮಂಜೂರಾತಿ ಸಹ ನೀಡಿದೆ.

ಹಾಗೂ ಡಾ॥ ಪಿ. ಸುರೇಶ್ ಭಟ್ (ಜೇಷ್ಠತಾ ಸಂಖ್ಯೆ : 575, ಕ್ರಮ ಸಂಖ್ಯೆ 43) ಇವರಿಗೆ ಸ್ವತಂತ್ರ ಪ್ರಭಾರದ ಮೇಲೆ ನೇಮಿಸಿದ್ದ ಸ್ಥಳ ವೀರ್ಯ ಸಂಕಲನಾ ಕೇಂದ್ರ, ಕೊಯಿಲಾ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಲು ಇಲಾಖಾ ಆಯುಕ್ತರು ದಿನಾಂಕ : 10–8–2009 ರಂದು ಅನುಮತಿ ನೀಡಿರುವ ಕ್ರಮಕ್ಕೆ ಸ್ಥಿರೀಕರಣ (Confirmation) ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2,

ಪಿ.ಆರ್. 1065

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ–ಎ).

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರದ ಆವರಣದಲ್ಲಿ ನೂತನ ತಾರಾಲಯ (Planetarium) ಸ್ಥಾಪನೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಸಂಬಂಧಿಸಿದಂತೆ ಸನ್ಮಾನ್ಯ ಮುಖ್ಯಮಂತ್ರಿಯವರ 2010–11ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 158.
2. ಸರ್ಕಾರಿ ಆದೇಶ ಸಂಖ್ಯೆ : ವಿಯಇ 182 ವಿತ್ರಮ 2009, ದಿನಾಂಕ 09–02–2011.
3. ಸದಸ್ಯ –ಕಾರ್ಯದರ್ಶಿ, ಪಿಲಿಕುಳ, ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ (ರಿ), ಮಂಗಳೂರು, ಇವರ ಪತ್ರ ಸಂಖ್ಯೆ : ಪಿಪ್ರಾವಿಕೆ/ಸಿಆರ್–15/ತಾರಾಲಯ/2009–10, ದಿನಾಂಕ 14–07–2010.
4. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 399 ಬಿಆರ್‌ಎಸ್ 2011, ದಿನಾಂಕ 19–03–2011.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ 2010–11ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 158 ರಲ್ಲಿ ಸನ್ಮಾನ್ಯ ಮುಖ್ಯ ಮಂತ್ರಿಯವರು "ಮಂಗಳೂರು ಬಳಿಯ ಪಿಲಿಕುಳದಲ್ಲಿ ನೂತನ ತಾರಾಲಯವನ್ನು ಸ್ಥಾಪಿಸಲು ರೂ. 1.00 ಕೋಟಿ ನೀಡಲಾಗುವುದು" ಎಂದು ಘೋಷಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ 09–02–2011ರ ಆದೇಶದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಒಳಪಡುವ ಮಂಗಳೂರಿನ ಪಿಲಿಕುಳ, ಪ್ರಾದೇಶಿಕ ವಿಜ್ಞಾನ ಕೇಂದ್ರದ ವತಿಯಿಂದ ವಿಜ್ಞಾನ ಕೇಂದ್ರದ ಆವರಣದಲ್ಲಿ ರೂ.15.50 ಕೋಟಿಗಳ ವೆಚ್ಚದಲ್ಲಿ ತಾರಾಲಯ (Planetarium) ಸ್ಥಾಪನೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಸದಸ್ಯ–ಕಾರ್ಯದರ್ಶಿ, ಪಿಲಿಕುಳ, ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ (ರಿ), ಮಂಗಳೂರು, ಇವರ ಪತ್ರದಲ್ಲಿ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರದ ವತಿಯಿಂದ ವಿಜ್ಞಾನ ಕೇಂದ್ರದ ಆವರಣದಲ್ಲಿ ನೂತನ ತಾರಾಲಯ ಸ್ಥಾಪನೆಯ ಉದ್ದೇಶಕ್ಕಾಗಿ ಅಂದಾಜು ರೂ.15.50 ಕೋಟಿಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಆದ್ದರಿಂದ 2010–11ನೇ ಸಾಲಿಗೆ ಬೇಕಾದ ರೂ. 300.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿ ಕೋರಿರುತ್ತಾರೆ.

2010–11ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿದಂತೆ ತಾರಾಲಯ ನಿರ್ಮಾಣಕ್ಕಾಗಿ ರೂ. 100.00 ಲಕ್ಷಗಳ ಬಿಡುಗಡೆ ಮಾಡುವಂತೆ ಆರ್ಥಿಕ ಇಲಾಖೆಯನ್ನು ಕೋರಲಾಗಿ ಆರ್ಥಿಕ ಇಲಾಖೆಯು ಮೇಲೆ (4) ರಲ್ಲಿ ಓದಲಾದ ಆದೇಶದಲ್ಲಿ ಮಂಗಳೂರಿನ ಪಿಲಿಕುಳ ವಿಜ್ಞಾನ ಕೇಂದ್ರದ ಆವರಣದಲ್ಲಿ ನೂತನ ತಾರಾಲಯವನ್ನು ಸ್ಥಾಪಿಸುವ ಸಂಬಂಧ 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3451–00–090–2–24 (059) ರಲ್ಲಿ ಲಭ್ಯವಿರುವ ಅನುದಾನದಿಂದ ಲೆಕ್ಕಶೀರ್ಷಿಕೆ 3425–60–200–0–20– ಜಿಲ್ಲಾ ವಿಜ್ಞಾನ ಕೇಂದ್ರಗಳು 101 ಸಹಾಯಾನುದಾನ (ಯೋಜನೆ) ಇದರಡಿ ಮರುಹೊಂದಾಣಿಕೆ ಮೂಲಕ ರೂ. 100.00 ಲಕ್ಷಗಳನ್ನು ಆರ್ಥಿಕ ಇಲಾಖೆಯು ಬಿಡುಗಡೆ ಮಾಡಿರುತ್ತಾರೆ. ಅದರನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಿಯಇ 182 ವಿತ್ರಮ 2009, ಬೆಂಗಳೂರು, ದಿನಾಂಕ 23–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ ವತಿಯಿಂದ ಪ್ರಾದೇಶಿಕ ವಿಜ್ಞಾನ ಕೇಂದ್ರದ ಆವರಣದಲ್ಲಿ ನೂತನ ತಾರಾಲಯವನ್ನು (Planetarium) ಸ್ಥಾಪಿಸಲು 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ 3451–00–090–2–24 (059) ರಲ್ಲಿ ಲಭ್ಯವಿರುವ ಅನುದಾನದಿಂದ ಲೆಕ್ಕ ಶೀರ್ಷಿಕೆ 3425–60–200–0–20– ಜಿಲ್ಲಾ ವಿಜ್ಞಾನ ಕೇಂದ್ರಗಳು 101 ಸಹಾಯಾನುದಾನ (ಯೋಜನೆ) ಇದರಡಿ ಮರುಹೊಂದಾಣಿಕೆ ಮೂಲಕ ರೂ. 100.00 ಲಕ್ಷಗಳ (ರೂಪಾಯಿ ನೂರು ಲಕ್ಷಗಳು ಮಾತ್ರ) ಅನುದಾನವನ್ನು ಸದಸ್ಯ–ಕಾರ್ಯದರ್ಶಿ, ಪಿಲಿಕುಳ, ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ, ಮಂಗಳೂರು ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಮಂಜೂರು ಮಾಡಿದೆ.

1) ಈ ಅನುದಾನವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 3425–60–200–0–20– ಜಿಲ್ಲಾ ವಿಜ್ಞಾನ ಕೇಂದ್ರಗಳು 101 ಸಹಾಯಾನುದಾನ (ಯೋಜನೆ) ಇದರಡಿ ಭರಿಸತಕ್ಕದ್ದು.
2) ಸದಸ್ಯ–ಕಾರ್ಯದರ್ಶಿ, ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ, ಮಂಗಳೂರು ಇವರು ಸ್ವೀಕೃತ ರಸೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಪೀಠಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.
3) ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು.
4) ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನಕ್ಕೆ ಲೆಕ್ಕ ಪರಿಶೋಧಕರಿಂದ ಪರೀಕ್ಷಿಸಲ್ಪಟ್ಟ ಲೆಕ್ಕ ಪತ್ರಗಳ ಉಪಯೋಗತಾ ಪ್ರಮಾಣ ಪತ್ರಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5) ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಉಳಿಸಿಕೊಂಡಲ್ಲಿ, ಅದನ್ನು ಸರ್ಕಾರಕ್ಕೆ ಪಾವತಿಸತಕ್ಕದ್ದು, ಇಲ್ಲವಾದಲ್ಲಿ ಅನುದಾನವನ್ನು ಬಳಸದೆ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು.
6) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 129 Exp–2/2011, ದಿನಾಂಕ 21.03.2011 ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 1071

## ಯುವಜನ ಸೇವಾ ಸಚಿವಾಲಯ

**ವಿಷಯ :** ಶ್ರೀ ಐ.ಆರ್. ಪೆರುಮಾಳ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ, ಇವರ ಶ್ರೀ ಪೆರಂಬದೂರ್ ಪ್ರವಾಸ ಕಾರ್ಯಕ್ರಮಕ್ಕೆ ಅನುಮತಿ ನೀಡುವ ಕುರಿತು.

**ಓದಲಾಗಿದೆ :** 1. ನಿರ್ದೇಶಕರು ಹಾಗೂ ಉಪ ಕುಲಪತಿ, ರಾಜೀವ್ ಗಾಂಧಿ ರಾಷ್ಟ್ರೀಯ ಯುವ ಅಭಿವೃದ್ಧಿ ಸಂಸ್ಥೆ, ಶ್ರೀ ಪೆರಂಬದೂರ್, ಅವರ ಪತ್ರ ಸಂಖ್ಯೆ : ಆರ್‌ಜಿ/ಎಸಿ/035/2010–11, ದಿನಾಂಕ 16.03.2011.
2. ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರ ಟಿಪ್ಪಣಿ ಸಂಖ್ಯೆ : ಸಿಎಸ್/42/ಎಲ್‌ಪಿ/2011, ದಿನಾಂಕ 25–03–2011.

**ಪ್ರಸ್ತಾವನೆ :**

ನಿರ್ದೇಶಕರು ಹಾಗೂ ಉಪ ಕುಲಪತಿ, ರಾಜೀವ್ ಗಾಂಧಿ ರಾಷ್ಟ್ರೀಯ ಯುವ ಅಭಿವೃದ್ಧಿ ಸಂಸ್ಥೆ, ಶ್ರೀ ಪೆರಂಬದೂರ್, ಅವರು ಮೇಲೆ (1) ರಲ್ಲಿ ಓದಲಾದ ದಿನಾಂಕ 16–03–2011ರ ಪತ್ರದಲ್ಲಿ ಯುವ ಅಭಿವೃದ್ಧಿಗಾಗಿ ಒಂದು ಯೋಜನೆಯನ್ನು ರೂಪಿಸುವ ಸಂಬಂಧ ಕ್ರಮ ಕೈಗೊಳ್ಳಲು ಸಂಸ್ಥೆಯಲ್ಲಿ ದಿನಾಂಕ 29–03–2011 ರಂದು ಕಾರ್ಯಾಗಾರವನ್ನು ಏರ್ಪಡಿಸಿದ್ದು, ಅದರಲ್ಲಿ ಪಾಲ್ಗೊಳ್ಳುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ, ಅವರನ್ನು ಕೋರಿದ್ದಾರೆ. ಸದರಿ ಕಾರ್ಯಾಗಾರದಲ್ಲಿ ಪಾಲ್ಗೊಳ್ಳಲು ಶ್ರೀ ಐ.ಆರ್. ಪೆರುಮಾಳ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ, ಅವರಿಗೆ ಅನುಮತಿ ನೀಡುವ ವಿಷಯವನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಯುಸೇಇ 81 ಸಮನ 11, ಬೆಂಗಳೂರು, ದಿನಾಂಕ 29–03–2011**

ಯುವ ಅಭಿವೃದ್ಧಿ ಕುರಿತು ರಾಜೀವ್ ಗಾಂಧಿ ರಾಷ್ಟ್ರೀಯ ಯುವ ಅಭಿವೃದ್ಧಿ ಸಂಸ್ಥೆ, ಶ್ರೀ ಪೆರಂಬದೂರ್, ಇಲ್ಲಿ ಜರುಗಲಿರುವ ಕಾರ್ಯಾಗಾರದಲ್ಲಿ ಪಾಲ್ಗೊಳ್ಳುವ ಸಲುವಾಗಿ ದಿನಾಂಕ 28–03–2011 ರಿಂದ 31–03–2011 ರವರೆಗೆ ಶ್ರೀ ಪೆರಂಬದೂರ್, ತಮಿಳುನಾಡು ಪ್ರವಾಸ ಕೈಗೊಳ್ಳಲು ಶ್ರೀ ಐ.ಆರ್. ಪೆರುಮಾಳ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ, ಅವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

ಪಿ.ಆರ್. 1072

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆಯ ಹಾಗೂ ತಾಲ್ಲೂಕಿನ ನಿಲೋಗಿಪುರ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರರವರ ಪತ್ರ ಕ್ರಮಾಂಕ ಮುಇಂ/ಸನೀ(ಉ)ವ/ತಾ.ಸ–3/ಸ.ಇಂ–7/ನಿಲೋಗಿಪುರ/2010–11/1436, ದಿನಾಂಕ:16.3.2011.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆಯ ಹಾಗೂ ತಾಲ್ಲೂಕಿನ ನಿಲೋಗಿಪುರ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯು 2010–11ನೇ ಸಾಲಿನ ಗಿರಿಜನ ಉಪಯೋಜನೆಯಡಿ ಅನುಮೋದನೆಗೊಂಡಿದ್ದು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12–11–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 20–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| | | |
|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಟೆಂಡರಿಗೆ ಇಡಲಾದ ಮೊತ್ತ | | ರೂ. 9,41,871/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಬಸವನಗೌಡ ಎಂ. ಪಾಟೀಲ ಗುತ್ತಿಗೆದಾರರು | 42,12,096/– | 347.20 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಸವನಗೌಡ ಎಂ. ಪಾಟೀಲ, ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ‍್ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 347.20 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 11–03–2011 ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 4.90 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.9,41,871/– ಗಳ ಮೇಲೆ ಶೇ. 4.90 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 9,88,023/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 05 ಏನೀಯೋ 2011 (ತಾಂತ್ರಿಕ), ಬೆಂಗಳೂರು, ದಿನಾಂಕ 01ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಹಾಗೂ ತಾಲ್ಲೂಕಿನ ನಿಲೋಗಿಪುರ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 9,41,871/–ಗಳ ಮೇಲೆ. ಶೇ.4.90 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 9,88,023/– ಗಳಿಗೆ (ರೂ. ಒಂಬತ್ತು ಲಕ್ಷ ಎಂಭತ್ತೆಂಟು ಸಾವಿರದ ಇಪ್ಪತ್ತ ಮೂರು) ಶ್ರೀ ಬಸವನಗೌಡ ಎಂ. ಪಾಟೀಲ, ಗುತ್ತಿಗೆದಾರರು, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪಿ.ಆರ್. 1073

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕಿನ ಮುಷ್ಟೂರ ಹಾಗೂ ಹೊಳೆಅನ್ವೇರಿ ಗ್ರಾಮದ ಬ್ರಿಡ್ಜ್ ಕಂ ಬ್ಯಾರೇಜ್ ವರ್ಕ್‌ಶೆಡ್ ಕೂಡು ರಸ್ತೆ ಮತ್ತು ಸ್ಟಾಕ್ ಯಾರ್ಡ್ ನಿರ್ಮಾಣದ ಭೂಸ್ವಾಧೀನಕ್ಕೆ ಒಪ್ಪಂದದ ಅವಾರ್ಡ್ ರಚಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009–10/3377, ದಿನಾಂಕ 09–06–2010.

**ಪ್ರಸ್ತಾವನೆ :**

ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕಿನ ಮುಷ್ಟೂರ ಹಾಗೂ ಹೊಳೆಅನ್ವೇರಿ ಗ್ರಾಮದ ಬ್ರಿಡ್ಜ್ ಕಂ ಬ್ಯಾರೇಜ್ ವರ್ಕ್‌ಶೆಡ್ ಕೂಡು ರಸ್ತೆ ಮತ್ತು ಸ್ಟಾಕ್ ಯಾರ್ಡ್ ನಿರ್ಮಾಣದ ಭೂಸ್ವಾಧೀನಕ್ಕೆ ಒಪ್ಪಂದದ ಅವಾರ್ಡ್ ರಚಿಸಲು ರೂ.11,29,969–00 ಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ದಿನಾಂಕ 09–06–10ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ 13–03–2008 ರಂದು 6(1)ರ ಅಧಿಸೂಚನೆಯನ್ನು ದಿನಾಂಕ 21–04–2009 ರಂದು ಹೊರಡಿಸಲಾಗಿದೆ. ದಿನಾಂಕ 23–02–10 ರಂದು ಉಪ ವಿಭಾಗಾಧಿಕಾರಿಗಳು, ಹಾವೇರಿ ರವರು ಒಪ್ಪಂದದ ದರ ನಿಗದಿಪಡಿಸಿದ್ದು, ಪ್ರತಿ ಎಕರೆಗೆ ರೂ.2,75,000/– ಗಳು ಹಾಗೂ ಪಂಚಾಯತ್ ಆಸ್ತಿ ಗುಂಟೆಗೆ ರೂ. 33,000/– ಗಳು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಸಂದಾಯ ಮಾಡಿದ ಸಂಭಾವ್ಯ ಮೊತ್ತ ರೂ.2,95,000/–ಗಳು. ಇದರಲ್ಲಿ ಉಪ ವಿಭಾಗಾಧಿಕಾರಿಗಳು, ಹಾವೇರಿ ಇವರು ಪತ್ರಿಕಾ ಪ್ರಕಟಣೆ ವೆಚ್ಚ ರೂ.23,156/– ಖರ್ಚು ಮಾಡಿದ್ದು, ಬಾಕಿ ಉಳಿದಿರುವ ಮೊತ್ತ ರೂ.2,71,844/– ಗಳು ನಿಗದಿಪಡಿಸಿರುವ ಒಪ್ಪಂದದ ದರ ಒಟ್ಟು ರೂ.14,01,812/–ಗಳು ಬಾಕಿ ಉಳಿದಿರುವ ಮೊತ್ತ ರೂ.11,29,969/–ಗಳನ್ನು ಬಿಡುಗಡೆ ಮಾಡಬೇಕಾಗಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 84 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 31ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕಿನ ಮುಷ್ಟೂರ ಹಾಗೂ ಹೊಳೆಅನ್ವೇರಿ ಗ್ರಾಮದ ಬ್ರಿಡ್ಜ್ ಕಂ ಬ್ಯಾರೇಜ್ ವರ್ಕ್‌ಶೆಡ್ ಕೂಡು ರಸ್ತೆ ಮತ್ತು ಸ್ಟಾಕ್ ಯಾರ್ಡ್ ನಿರ್ಮಾಣದ ಭೂಸ್ವಾಧೀನಕ್ಕೆ ಒಪ್ಪಂದದ ಅವಾರ್ಡ್ ರಚಿಸಲು ರೂ.11,29,969 ಗಳನ್ನು (ಹನ್ನೊಂದು ಲಕ್ಷದ ಇಪ್ಪತ್ತೊಂಭತ್ತು ಸಾವಿರದ ಒಂಭೈನೂರ ಅವರತ್ತೊಂಭತ್ತು ರೂ.ಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ : ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1074

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಕುಣಕೇರಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ರವರ ಪತ್ರ ಕ್ರಮಾಂಕ ಮುಇಂ/ಸನೀ(ಉ)ವ/ತಾ.ಸ–3/ಸ.ಇಂ.–7/ಕುಣಕೇರಿ/2010–11/941, ದಿನಾಂಕ 22.2.2011.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆಯ ಹಾಗೂ ತಾಲ್ಲೂಕಿನ ಕುಣಕೇರಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯು 2010–11ನೇ ಸಾಲಿನ ಗಿರಿಜನ ಉಪಯೋಜನೆಯಡಿ ಅನುಮೋದನೆಗೊಂಡಿದ್ದು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12–11–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 20–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010–11) ಟೆಂಡರಿಗೆ ಇಡಲಾದ ಮೊತ್ತ | | | ರೂ. 9,20,253/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಬಿ.ಎಂ. ಪಾಟೀಲ ಗುತ್ತಿಗೆದಾರರು | 10,11,680/– | 9.93 ಹೆಚ್ಚು |
| 2 | ಐ.ಆರ್. ಘಾಟೆ ಗುತ್ತಿಗೆದಾರರು | 71,72,786/– | 679.43 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ.ಎಂ. ಪಾಟೀಲ, ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಕಡಿಮೆ ದರಗಳನ್ನು ನಮೂದಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 9.93 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 16–03–2011 ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 5 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.9,20,253/– ಗಳ ಮೇಲೆ ಶೇ. 5 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 9,66,266/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ಏನೀಯೋ 2011 (ತಾಂತ್ರಿಕ), ಬೆಂಗಳೂರು, ದಿನಾಂಕ 01ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಹಾಗೂ ತಾಲ್ಲೂಕಿನ ಕುಣಕೇರಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 9,20,253/–ಗಳ ಮೇಲೆ. ಶೇ.5 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 9,66,266/– ಗಳಿಗೆ (ರೂ. ಒಂಬತ್ತು ಲಕ್ಷ ಅರವತ್ತಾರು ಸಾವಿರದ ಇನ್ನೂರ ಅರವತ್ತಾರು) ಶ್ರೀ ಬಿ.ಎಂ. ಪಾಟೀಲ, ಗುತ್ತಿಗೆದಾರರು, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1075

## WATER RESOURCES SECRETARIAT

**Sub:** Issue of Government Guarantee for the borrowing programme of KBJNL to the extent of Rs.500.00 crores.

**Read:** Letter No. KBJNL/FD/RES/331/2010-11/214, Dated 15-5-2010.

**Preamble:**

Managing Director, Krishna Bhagya jala Nigam Limited vide their letter above had requested to Government for according approval for borrowing Rs.500.00 crores by issue of bonds and/or through raising term loans from Banks, Financial Institutions.

The request of Krishna Bhagya jala Nigam Limited has been carefully examined by the Government and has decided to agree to the request of the Managing Director, KBJNL and hence the following Orders :

**GOVERNMENT ORDER NO.: WRD 105 KBN 2010, DATED: 31-03-2011**

In principle approval of Government is accorded to Krishna Bhagya jala Nigam Limited to mobilize Rs.500.00 crores and to initiate action for the same during 2010-11, subject to the following:

1. Amount borrowed should be utilized for the expenditure during the year 2011-12.
2. Funds may be raised by issue of bonds and/or through raising of term loans from Banks/Financial Institutions at competitive coupon rate to be fixed based on the market condition at the time of borrowing.
3. Unconditional, irrevocable, irreversible Government Guarantee for the repayment of principal and payment of interest till the redemption of bonds/repayment of loans with permission to roll over these guarantees in case repayments are to be restructured has been given by the Government.
4. Approval has been accorded for making budgetary provision for payment of interest and repayment of principal on due dates.
5. Approval has been accorded to offer the assets of the Nigam as collateral security by way of pari-passu charge on the assets to be hypothecated to the Trustees of the bondholders and/or lenders to the extent of 1.25 times of the amount borrowed or as requested by the lenders.
6. The Board of KBJNL has been authorized to finanlize the structures of the bonds/term loans like interest rates, tenure of the loans/bonds and other terms and conditions as per the recommendations of the Finance Sub Committee of the Board of Directors of Krishna Bhagya jala Nigam Limited under the Chairmanship of the Principal Secretary Finance Department.

By order and in the name of the Governor of Karnataka

**I.D. DHAMAN,**

Officer on Special Duty,

Water Resources Department (KBJNL).

PR No. 1076

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಮೇಳಕುಂದಾ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಬಾಕಿ ಮೊತ್ತವನ್ನು ಪಾವತಿಸುವ ಕುರಿತು.

**ಓದಲಾಗಿದೆ :**

1. ದಿನಾಂಕ 24–02–2006ರ ಸರ್ಕಾರದ ಆದೇಶ ಸಂಖ್ಯೆ : ಸನೀಇ 151 ಭೂಸ್ವಾಪ್ರ 2005.
2. ದಿನಾಂಕ 22–07–2008ರ ಸರ್ಕಾರದ ಆದೇಶ ಸಂಖ್ಯೆ : ಸನೀಇ 151 ಭೂಸ್ವಾಪ್ರ 2005.
3. ದಿನಾಂಕ 29–05–2008ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ರವರ ಪತ್ರದ ಸಂಖ್ಯೆ : ಕಂ/ವಿಭೂಸ್ವಾ/1/21/86–87.
4. ದಿನಾಂಕ 04–10–2008ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ಪತ್ರದ ಸಂಖ್ಯೆ : ಮುಇಂ/ಸನೀ(ಉ)ವ/ಭೂಸ್ವಾ/ಬಿಜೆಪಿ/2010–11/5454.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆಯ, ಗುಲ್ಬರ್ಗಾ ತಾಲ್ಲೂಕು ಮೇಳಕುಂದಾ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಈಗಾಗಲೇ 2 ಬಾರಿ ಹಣ ಬಿಡುಗಡೆ ಮಾಡಲಾಗಿದೆ. ಸ್ವಾಧೀನಕ್ಕೊಳಪಟ್ಟ ಜಮೀನುಗಳನ್ನು ಇಲಾಖೆಯ ವಶಕ್ಕೆ ಕಬ್ಜೆ ಪಡೆದ ದಿನಾಂಕದ ಬಗ್ಗೆ ಸ್ಪಷ್ಟವಾದ ಮಾಹಿತಿ ಇಲ್ಲದೇ ಇದ್ದುದರಿಂದ, ಭೂ ಸ್ವಾಧೀನ ಕಾಯ್ದೆ ಕಲಂ 16(2)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 21–04–01 ರಿಂದ ಪರಿಹಾರ ಧನದ ಮೇಲೆ ಬಡ್ಡಿಯನ್ನು ದಿನಾಂಕ 31–01–06ರವರೆಗೆ ಲೆಕ್ಕ ಹಾಕಿ ಮೇಲೆ (1) ರಲ್ಲಿ ಓದಲಾದ ದಿನಾಂಕ 24–02–06ರ ಸರ್ಕಾರದ ಆದೇಶದಲ್ಲಿ ರೂ.42,23,411–00ಗಳನ್ನು ಬಿಡುಗಡೆ ಮಾಡಲಾಗಿದೆ. ತದನಂತರ ಕಬ್ಜೆ ದಿನಾಂಕವನ್ನು ಭೂ ಸ್ವಾಧೀನಾಧಿಕಾರಿಗಳಿಂದ ದೃಢೀಕರಿಸಿಕೊಂಡು ದಿನಾಂಕ 20–03–91 ರಿಂದ 31–01–06 ರವರೆಗೆ ಲೆಕ್ಕ ಹಾಕಿದ ಬಡ್ಡಿಯೊಂದಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ 22–07–08ರ ಸರ್ಕಾರದ ಆದೇಶದಲ್ಲಿ ರೂ.38,73,159–00 ಗಳನ್ನು ಬಿಡುಗಡೆ ಮಾಡಲಾಗಿದೆ. ಪಾವತಿಸಲು ಅನುಮೋದನೆ ನೀಡಲಾಗಿದೆ. ಆದರೆ, ಭೂಮಾಲೀಕರು ಬಾಕಿ ಮೊತ್ತ ಬಿಡುಗಡೆಗೆ 2006 ರಿಂದ 2008 ರವರೆಗೆ ವಿಳಂಬವಾಗಿರುವುದನ್ನು ಆಕ್ಷೇಪಿಸಿದ್ದರಿಂದ, ದಿನಾಂಕ 01–02–06 ರಿಂದ 22–07–08 ರವರೆಗಿನ ಅವಧಿಗೆ ಬಡ್ಡಿ ಲೆಕ್ಕ ಹಾಕಿ ರೂ.9,45,315–00 ಗಳನ್ನು ಬಿಡುಗಡೆ ಮಾಡುವಂತೆ ಕೋರಿ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಭೂ ಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಪಾವತಿಸಬೇಕಾದ ಬಾಕಿ ಮೊತ್ತದ ಪ್ರಕರಣವಾರು ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ | ಪಾವತಿಸಬೇಕಾದ ಬಾಕಿ ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 337/98 | 85/3 | 0-23 w<br>0-37 d | 15174 |
| 2 | 338/98 | 85/2 | 5-13 d<br>1-10 w | 59582 |
| 3 | 339/98 | 85/1 | 1-14 d<br>0-23 w | 18584 |
| 4 | 340/98 | 84/3 | 5-30 d | 46143 |
| 5 | 341/98 | 84/2 | 4-02 d | 32501 |
| 6 | 342/98 | 84/1 | 5-16 d | 43334 |
| 7 | 343/98 | 83/4 | 1-25 d | 13040 |
| 8 | 344/98 | 83/2 | 1-22 d | 12438 |
| 9 | 345/98 | 83/1 | 1-38 d | 15648 |
| 10 | 346/98 | 82/3 | 7-10 d | 58180 |
| 11 | 347/98 | 82/2 | 2-04 d | 16852 |
| 12 | 348/98 | 71/3 | 0-15 | 3009 |
| 13 | 349/98 | 68/5 | 2-32 d | 22469 |
| 14 | 350/98 | 68/4 | 2-04 d | 16852 |
| 15 | 351/98 | 68/3 | 0-32 d | 6419 |
| 16 | 352/98 | 68/2 | 6-22 d | 52563 |
| 17 | 353/98 | 68/1 | 6-27 d | 53566 |
| 18 | 354/98 | 67/1-2,67/3, 67/1-4 | 12-00 d | 96299 |
| 19 | 355/98 | 67/1 | 1-16 d | 11234 |
| 20 | 356/98 | 65/6 | 0-11 | 2206 |
| 21 | 357/98 | 65/5 | 0-07 | 1478 |
| 22 | 358/98 | 64/3 | 1-00 d | 8024 |
| 23 | 359/98 | 38/2 | 1-08 d | 9630 |
| 24 | 360/98 | 37/2 | 4-00 d | 32099 |
| 25 | 361/98 | 85/13 | 0-17 d<br>0-23 w | 11361 |
| 26 | 362/98 | 82/1 | 2-14 d | 18858 |
| 27 | 363/98 | 83/3 | 1-24 d | 12839 |
| 28 | 364/98 | 90/2 | 2-00 d | 16049 |
| 29 | 365/98 | 86/2 | 3-04 d | 24877 |
| 30 | 366/98 | 85/12 | 1-01 d<br>0-23 w | 16377 |
| 31 | 367/98 | 89/2 | 15-25 d | 125389 |
| 32 | 369/98 | 87/3 | 0-16 | 3209 |
| 33 | 369/98 | 85/10 | 0-04 d<br>0-23 w | 8753 |
| 34 | 370/98 | 85/9 | 0-04 d<br>0-23 w | 8753 |
| 35 | 371/98 | 85/8 | 0-24 d | 4815 |
| 36 | 372/98 | 85/6 | 1-02 d<br>0-23 w | 16563 |
| 37 | 373/98 | 85/7 | 0-36 d<br>0-23 w | 15174 |
| 38 | 374/98 | 85/11 | 0-17 d<br>0-23 w | 11361 |
| 39 | 375/98 | 85/5 | 0-18 d | 3611 |
| | | ಒಟ್ಟು | | **945313** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 70 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 31ನೇ ಮಾರ್ಚ್ 2011**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಮೇಳಕುಂದಾ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮೇಳಕುಂದಾ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾ ಹಾಕಿದ ಬಾಕಿ ಪರಿಹಾರ ಧನ ಮೊತ್ತ ರೂ.9,45,313-00 ಗಳನ್ನು (ಒಂಭತ್ತು ಲಕ್ಷದ ನಲವತ್ತೈದು ಸಾವಿರದ ಮುನ್ನೂರ ಹದಿಮೂರು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ : ಆಇ 01 ಬಿಎಸ್‌ಜಿ 2011, ದಿನಾಂಕ 19-03-2011 ರಲ್ಲಿ ಒದಗಿಸಿರುವ ಪೂರಕ ಅನುದಾನ-III ರಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20-10-2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1077

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು, ಬೇಳೂರು ಗ್ರಾಮದ ಹತ್ತಿರ ಮಾವಿನ ಹೊಳೆಗೆ ಏತ ನೀರಾವರಿ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 06 ನಯೋಕಾ 2009, ದಿನಾಂಕ 06-01-2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ : ಮುಸ(ದ)/ತಾಂ.3/ಸ.ಇಂ.8/ಶಿವಮೊಗ್ಗ/ಇ-ಟೆಂಡರ್/2010-11, 79, ದಿನಾಂಕ 06.01.2011.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 22.01.2011 ಪತ್ರ ಸಂಖ್ಯೆ : ಮುಸದ/ಆಪ್ತ ಶಾಖೆ/ ಟೆಂಡರ್/08-09/249.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಬಾರ್ಡ್ ಆರ್.ಐ.ಡಿ.ಎಫ್.-15 ರಲ್ಲಿ ರೂ.15045.45 ಲಕ್ಷ ಅಂದಾಜು ಮೊತ್ತದ 385 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಪೈಕಿ ರೂ. 70.00 ಲಕ್ಷ ಮೊತ್ತದ ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು, ಬೇಳೂರು ಗ್ರಾಮದ ಹತ್ತಿರ ಮಾವಿನ ಹೊಳೆಗೆ ಏತ ನೀರಾವರಿ ಕಾಮಗಾರಿಯು ಸೇರಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ಬೆಂಗಳೂರುರವರ ನೋಂದಣಿ 142/2009-10 ದಿನಾಂಕ 23-03-2010 ರಲ್ಲಿ ಅಂದಾಜಿಗೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | 30-10-2010 |
| ಉದಯವಾಣಿ ದಿನಪತ್ರಿಕೆ | 09-11-2010 |

ಟೆಂಡರ್‌ನ ತಾಂತ್ರಿಕ ಬಿಡ್ ಅನ್ನು ದಿನಾಂಕ 19-11-2010 ರಂದು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬ ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಹಾಗೂ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ನ್ನು 21-11-2010 ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 65,76,348/- |
| ಸಿಮೆಂಟ್ ಮತ್ತು ಉಕ್ಕಿನ ಪ್ರಸಕ್ತ ಮಾರುಕಟ್ಟೆ ದರಗಳನ್ನು ಪರಿಗಣಿಸಿದಂತೆ ಪರಿಷ್ಕೃತ ಟೆಂಡರಿಗೆ ಇಡಲಾದ ಮೊತ್ತ | | | | ರೂ. 74,22,524/- |
| ಕ್ರಮ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ | ಟೆಂಡರ್‌ನಲ್ಲಿ ಗುತ್ತಿಗೆದಾರರು | ಮಂಜೂರಾದ ದರಗಳ | ಪರಿಷ್ಕೃತ ದರಗಳ ಮೇಲಿನ |

| ಸಂಖ್ಯೆ | ಶ್ರೀ/ಮೆಸರ್ಸ್ | ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ವಿ. ದಯಾನಂದ್, 1ನೇ ದರ್ಜೆ ಗುತ್ತಿಗೆದಾರರು, ಸಾಗರ | 82,81,311/– | 25.93 ಹೆಚ್ಚು | 11.57 ಹೆಚ್ಚು |

ಮೇಲ್ಕಂಡಂತೆ ವಿ. ದಯಾನಂದ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.57 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06–01–2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 74,22,524/–ಗಳ ಮೇಲೆ ಶೇ. 7.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ವಿ. ದಯಾನಂದ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಸಮಿತಿಯ ಶಿಫಾರಸ್ಸು ಪರಿಶೀಲಿಸಿ, ಟೆಂಡರನ್ನು ಪರಿಷ್ಕೃತ ಮೊತ್ತದ ಮೇಲೆ ಶೇಕಡ 4.00 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 77,19,425/–ಗಳಿಗೆ ಕಾಮಗಾರಿಯನ್ನು ಶ್ರೀ ವಿ. ದಯಾನಂದ್, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 04 ಏನೀಯೋ 2011, ಬೆಂಗಳೂರು, ದಿನಾಂಕ 26ನೇ ಫೆಬ್ರವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು, ಬೇಲೂರು ಗ್ರಾಮದ ಹತ್ತಿರ ಮಾವಿನ ಹೊಳೆಗೆ ಏತ ನೀರಾವರಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 74,22,524/–ಗಳ ಮೇಲೆ ಶೇ. 4.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 77,19,425/–ಗಳಿಗೆ (ರೂ. ಎಪ್ಪತ್ತೇಳು ಲಕ್ಷ ಹತ್ತೊಂಬತ್ತು ಸಾವಿರದ ನಾಲ್ಕು ನೂರ ಇಪ್ಪತ್ತೈದು ಮಾತ್ರ) ಕಾಮಗಾರಿಯನ್ನು ಶ್ರೀ ವಿ. ದಯಾನಂದ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪಿ.ಆರ್. 1078

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ – ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಸಂಸ್ಥೆಯಿಂದ ಪಡೆದಿದ್ದ ಸಾಲದ ಮರುಪಾವತಿಗಾಗಿ (ದಿನಾಂಕ 30–09–2010 ಮತ್ತು 31.12.2010 ರ ಅಂತ್ಯಕ್ಕೆ) ಸರ್ಕಾರದಿಂದ ಅಸಲು ಮತ್ತು ಬಡ್ಡಿ ಪಾವತಿ ಮಾಡಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಐ 184 ಎಸ್‌ಜಿಎಫ್ 2007, ದಿನಾಂಕ 26–03–2010.
2. ಸರ್ಕಾರದ ಆದೇಶ ಸಂಖ್ಯೆ : ಸಿಐ 184 ಎಸ್‌ಜಿಎಫ್ 2007, ದಿನಾಂಕ 23–07–2010.
3. ಸರ್ಕಾರದ ಆದೇಶ ಸಂಖ್ಯೆ : ಸಿಐ 184 ಎಸ್‌ಜಿಎಫ್ 2007 (3), ದಿನಾಂಕ 18–12–2010.
4. ಫೈನಾನ್ಸ್ ಆಫೀಸರ್, ಹುಡ್ಕೋರವರ ಪತ್ರ ಸಂಖ್ಯೆ : FIN/LOAN/DEM/67/2011/1729(17), ದಿನಾಂಕ 07–02–2011.
5. ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ : MSCO/MD/DO/2011/150, ದಿನಾಂಕ 07–03–2011.

**ಪ್ರಸ್ತಾವನೆ :**

ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಯಲ್ಲಿ ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಹಣಕಾಸು ಸಂಸ್ಥೆಯಿಂದ 5726.16 ಲಕ್ಷ ರೂ.ಗಳ ಸಾಲ ಪಡೆಯಲು ದಿನಾಂಕ 30–07–2001 ರಂದು ಕಾರ್ಖಾನೆಯು ಹುಡ್ಕೋದೊಂದಿಗೆ ಒಪ್ಪಂದ ಮಾಡಿಕೊಂಡಿದ್ದು, ರಾಜ್ಯ ಸರ್ಕಾರವು ಸದರಿ ಸಾಲಕ್ಕೆ ಗ್ಯಾರಂಟಿ ನೀಡಿದ್ದು, ಮೇಲೆ ಓದಲಾದ (1), (2) ಮತ್ತು (3) ರಲ್ಲಿರುವ ಆದೇಶಗಳಲ್ಲಿ

ಹುಡ್ಕೋ ಸಂಸ್ಥೆಯು ಮಾಡಿದ OTS offer ನಂತೆ ಸಾಲದ ಮೇಲಿನ ಕ್ರೋಢೀಕೃತ ಬಡ್ಡಿ ಪಾವತಿಗಾಗಿ ಒಟ್ಟು 5160.41 ಲಕ್ಷ ರೂ.ಗಳನ್ನು ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (4) ರಲ್ಲಿರುವ ಫೈನಾನ್ಸ್ ಆಫೀಸರ್, ರೀಜನಲ್ ಆಫೀಸ್, ಹುಡ್ಕೋ, ಬೆಂಗಳೂರು ರವರ ಪತ್ರದಲ್ಲಿ OTS offer ನಂತೆ ಮಾರ್ಚ್ 2011ರ ಅಂತ್ಯಕ್ಕೆ ಅಸಲು ಮತ್ತು ಬಡ್ಡಿ ಸೇರಿ 335.58 ಲಕ್ಷ ರೂ.ಗಳು ಕಾರ್ಖಾನೆಯು ಹುಡ್ಕೋ ಸಂಸ್ಥೆಗೆ ಪಾವತಿಸಬೇಕಾಗಿದೆ ಎಂದು ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರಿಗೆ ಬೇಡಿಕೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ (5) ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರದಲ್ಲಿ OTS offer ನಂತೆ ದಿನಾಂಕ 31–03–2011ರ ಅಂತ್ಯಕ್ಕೆ ಅಸಲು ಮತ್ತು ಬಡ್ಡಿ ಸೇರಿ 335.58 ಲಕ್ಷ ರೂ.ಗಳನ್ನು ಹುಡ್ಕೋಗೆ ಪಾವತಿಸಬೇಕಾಗಿದ್ದು, ಹುಡ್ಕೋ ಸಂಸ್ಥೆಗೆ ಪಾವತಿಸಲು ಕಾರ್ಖಾನೆಯ ಬಳಿ ಹಣ ಇಲ್ಲದಿರುವುದರಿಂದ ಸರ್ಕಾರದಿಂದ ಹಣ ಬಿಡುಗಡೆ ಮಾಡುವಂತೆ ಮನವಿ ಮಾಡಿದ್ದಾರೆ.

ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಹುಡ್ಕೋ ಸಂಸ್ಥೆಯ ಜೊತೆಗೆ ಮಾಡಿಕೊಳ್ಳಲಾಗಿರುವ OTS offer ನಂತೆ ದಿನಾಂಕ 31–03–2011ರ ಅಂತ್ಯಕ್ಕೆ ಹುಡ್ಕೋ ಸಂಸ್ಥೆಗೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ ಸೇರಿ 335.58 ಲಕ್ಷಗಳನ್ನು ಸರ್ಕಾರದಿಂದ ಪಾವತಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 08 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ 05ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಯ ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಮತ್ತು ಶುಗರ್ಸ್ ಗೋಡೌನ್ ಕಟ್ಟಲು ಹುಡ್ಕೋ ಹಣಕಾಸು ಸಂಸ್ಥೆಯಿಂದ ಪಡೆಯಲಾಗಿದ್ದ 5726.16 ಲಕ್ಷ ರೂ.ಗಳ ಸಾಲದ ಮರುಪಾವತಿ ಸಂಬಂಧ ಹುಡ್ಕೋ ಸಂಸ್ಥೆಯು ಮಾಡಿರುವ OTS offer ನಂತೆ ಮಾರ್ಚ್ 2011ರ ಅಂತ್ಯಕ್ಕೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ ಸೇರಿ ಒಟ್ಟು 335.58 ಲಕ್ಷ ರೂ.ಗಳನ್ನು (ಮುನ್ನೂರ ಮೂವತ್ತೈದು ಲಕ್ಷ ಮತ್ತು ಐವತ್ತೆಂಟು ಸಾವಿರ ರೂ.ಗಳು ಮಾತ್ರ) ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

OTS offer ನಂತೆ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳಂತೆ ಬಾಕಿ ಇರುವ ಹಣವನ್ನು ಕಾಲಕಾಲಕ್ಕೆ ಕಾರ್ಖಾನೆಯು ಬಡ್ಡಿಯೊಂದಿಗೆ ಹುಡ್ಕೋ ಸಂಸ್ಥೆಗೆ ಮರುಪಾವತಿಸಲು ಕ್ರಮ ತೆಗೆದುಕೊಳ್ಳುವುದು.

2011–12 ನೇ ಸಾಲಿನ ಅನುದಾನದಲ್ಲಿ ಈ ಉದ್ದೇಶಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಲೆಕ್ಕ ಶೀರ್ಷಿಕೆ "4860–04–190–1–00–211" Investment (Plan) ಅಡಿಯಲ್ಲಿ 2011–12ನೇ ಸಾಲಿಗೆ ಒದಗಿಸಲಾಗಿರುವ 1500.00 ಲಕ್ಷ ಅನುದಾನದಲ್ಲಿ ರೂ.335.58 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 515–ವೆಚ್ಚ–1/2011, ದಿನಾಂಕ 28–03–2011 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಶಂಕರ್ ನಾಯಕ್, ಎಲ್.**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1079

## ಕಾರ್ಮಿಕ ಸಚಿವಾಲಯ

**ವಿಷಯ :** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು 2011–12ನೇ ಆರ್ಥಿಕ ವರ್ಷಕ್ಕೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ, ಬೆಂಗಳೂರು, ಇವರ ಪತ್ರ ಸಂ.ಈಎಸ್‌ಟಿ–1/ಆರ್‌ಪಿಪಿ/ಸಿಆರ್–10/2010–11, ದಿನಾಂಕ: 21/03/2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ, ಬೆಂಗಳೂರು, ಇವರ ದಿನಾಂಕ: 21/03/2011ರ ಪತ್ರದಲ್ಲಿ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಸಂಬಂಧಿಸಿದಂತೆ, 2010–11ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಮುಂದುವರೆಸಲಾದ ಹುದ್ದೆಗಳನ್ನು 2011–12ನೇ ಸಾಲಿನಲ್ಲಿ ಮುಂದುವರೆಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. 2010–11ನೇ ಸಾಲಿನಲ್ಲಿನ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಇರುವ ಹುದ್ದೆಗಳನ್ನು 2011–12ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ ಕಾರ್ಮಿಕ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 22/03/2011ರಂದು ನಡೆದ ಸಭೆಯಲ್ಲಿ ವಿವರವಾಗಿ ಚರ್ಚಿಸಿ ಯೋಜನೆ ಲೆಕ್ಕ ಶೀರ್ಷಿಕೆ "2230–01–102–0–01 (ಪ್ಲಾನ್)", "ವರ್ಕಿಂಗ್ ಕಂಡೀಷನ್ಸ್ ಅಂಡ್ ಸೇಫ್ಟಿ–ಇನ್ಸ್‌ಪೆಕ್ಟರ್ಸ್ ಆಫ್ ಫ್ಯಾಕ್ಟರೀಸ್" ಈ ಯೋಜನೆ ಅಡಿಯಲ್ಲಿ 18 ಹುದ್ದೆಗಳನ್ನು 2011–12ನೇ ಸಾಲಿಗೆ ಮುಂದುವರೆಸಲು ಹಾಗೂ ಲೆಕ್ಕ ಶೀರ್ಷಿಕೆ "2230–01–102–0–01–015 ಪೂರಕ ವೆಚ್ಚಗಳು (ಯೋಜನೆ)" ಇದರ ಅಡಿಯಲ್ಲಿ "ಮಹಿಳಾ ಹಕ್ಕು ತರಬೇತಿ ಮತ್ತು ಸುರಕ್ಷತಾ ಉಸ್ತುವಾರಿ ಕೇಂದ್ರ " ಈ ಯೋಜನೆಯನ್ನು 2011–12ನೇ ಸಾಲಿಗೆ ಮುಂದುವರೆಸಲು ಜೊತೆಗೆ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆಗಳನ್ನು ಸಹ ಅನುಷ್ಠಾನಗೊಳಿಸಲು ಅನುಕೂಲವಾಗುವಂತೆ ಆದೇಶ

ಹೊರಡಿಸಲು ಸಭೆಯು ತೀರ್ಮಾನಿಸಿತು. ಆ ಪ್ರಕಾರ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ. ಈ ಯೋಜನೆಗಳಿಗೆ 2011–12ನೇ ಸಾಲಿನ ಆಯವ್ಯಯದಲ್ಲಿ ಒಟ್ಟು ರೂ. 80.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.

**ಆದೇಶ ಸಂಖ್ಯೆ: ಕಾಇ 8 ಕಾಬಾಸೇ 2011 ಬೆಂಗಳೂರು, ದಿನಾಂಕ: 01/04/2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಹಾಗೂ ದಿನಾಂಕ: 22/03/2011ರಂದು ನಡೆದ ಸಭೆಯ ನಡವಳಿಯಂತೆ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಸಂಬಂಧಿಸಿದಂತೆ 2011–12ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳು ಈ ಕೆಳಗಿನಂತಿವೆ:

1. 2010–11ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳು "ವರ್ಕಿಂಗ್ ಕಂಡೀಷನ್ಸ್ ಅಂಡ್‌ಸೇಫ್ಟಿ–ಇನ್‌ಸ್ಪೆಕ್ಟರ್ಸ್ ಆಫ್ ಫ್ಯಾಕ್ಟರೀಸ್" ಈ ಯೋಜನೆಯಡಿಯಿರುವ ಹುದ್ದೆಗಳನ್ನು 2011–12ನೇ ಸಾಲಿನಲ್ಲಿ ಮುಂದುವರೆಸುವುದು.
2. 2007–08ನೇ ಸಾಲಿನಲ್ಲಿ ಆರಂಬಿಸಿ 2010–11ನೇ ಸಾಲಿನಲ್ಲಿ ಮುಂದುವರಿಸಲಾಗಿದ್ದ "ಮಹಿಳಾ ಹಕ್ಕು ತರಬೇತಿ ಮತ್ತು ಸುರಕ್ಷತಾ ಉಸ್ತುವಾರಿ ಕೇಂದ್ರ" ಈ ಯೋಜನೆಯನ್ನು 2011–12ನೇ ಸಾಲಿನಲ್ಲಿಯೂ ಮುಂದುವರೆಸುವುದು.
3. ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆಗಳನ್ನು ಸಹ ರೂಪಿಸಿಕೊಂಡು ಕಾರ್ಖಾನೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದಲ್ಲಿ ವರ್ಗೀಕರಣಗೊಂಡ ಕಾರ್ಮಿಕರಿಗೆ ಅವರಿಗಿರುವ ಹಕ್ಕು, ಕಾನೂನು, ಕಲ್ಯಾಣ ಮತ್ತು ಇತರೆ ಸೌಲಭ್ಯಗಳ ಬಗ್ಗೆ ಅರಿವು ಮೂಡಿಸುವಂತಹ ಕಾರ್ಯಕ್ರಮಗಳನ್ನು 2011–12ನೇ ಸಾಲಿನಲ್ಲಿ ನಡೆಸುವುದು.

ಈ ಮೇಲಿನ ಎರಡು ಯೋಜನಾ ಕಾರ್ಯಕ್ರಮಗಳನ್ನು ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಇರುವಂತೆ 2011–12ನೇ ಸಾಲಿಗೆ ಮುಂದುವರೆಸಲು ಈ ಕೆಳಕಾಣಿಸಿದ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ:

1. 2010–11ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮಾತ್ರ 2011–12ನೇ ಸಾಲಿನಲ್ಲಿ ಮುಂದುವರೆಸಬೇಕು.
2. 2010–11ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಹುದ್ದೆಗಳು ರದ್ದಾಗಿದ್ದಲ್ಲಿ, ಅಂತಹವುಗಳನ್ನು 2011–12ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳಿಂದ ತೆಗೆದು ಹಾಕುವುದು ಹಾಗೂ 2010–11ನೇ ಸಾಲಿನಲ್ಲಿ ಯೋಜನಾ ಕಾರ್ಯಕ್ರಮಗಳನ್ನು ಕೈಬಿಟ್ಟಿದ್ದರೆ ಅಂತಹ ಕಾರ್ಯಕ್ರಮಗಳನ್ನು 2011–12ನೇ ಸಾಲಿನಲ್ಲಿ ಯೋಜನೆಯಡಿಯಲ್ಲಿ ಮುಂದುವರೆದ ಕಾರ್ಯಕ್ರಮಗಳ ಪಟ್ಟಿಯಿಂದ ತೆಗೆದು ಹಾಕಬೇಕು.
3. ಮುಂದುವರೆದ ಯೋಜನಾ ಕಾರ್ಯಕ್ರಮಗಳಲ್ಲಿ ಯಾವುದೇ ಹೊಸ ಘಟಕಗಳ ಪ್ರಸ್ತಾವನೆಗಳು, ವಾಹನ ಖರೀದಿ ಪ್ರಸ್ತಾವನೆಗಳು ಇದ್ದಲ್ಲಿ ಅವುಗಳಿಗೆ ಪ್ರತ್ಯೇಕವಾದ ಪ್ರಸ್ತಾವನೆಗಳನ್ನು ಸಲ್ಲಿಸಿ, ನಿಯಮಾನುಸಾರ ಮಂಜೂರಾತಿ ಪಡೆಯಬೇಕು.
4. ಆರ್ಥಿಕ ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ಆರ್ಥಿಕ ಮಿತವ್ಯಯ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿ:10/07/1996ರನ್ವಯ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಬಿ. **ಶಿವರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ

(ಕಾರ್ಖಾನೆ ಮತ್ತು ಬಾಯ್ಲರುಗಳು)

## ಅನುಬಂಧ

ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಸಂಬಂಧಿಸಿದಂತೆ 2011–12ನೇ ಸಾಲಿಗೆ ಯೋಜನಾ ಸ್ಕೀಂನಡಿ ಮುಂದುವರೆಸಬೇಕಾದ ಹುದ್ದೆಗಳ ವಿವರ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಸ್ಕೀಂನ ಹೆಸರು ಮತ್ತು ಖರ್ಚನ್ನು ಕಳೆಯಬೇಕಾದ ಲೆಕ್ಕ ಶೀರ್ಷಿಕೆ | 2011–12ನೇ ಸಾಲಿಗೆ ಮಂಜೂರಾಗಿರುವ ಬಜೆಟ್ | ಹುದ್ದೆಗಳ ಮಂಜೂರಾತಿ ಆದೇಶ ಮತ್ತು ದಿನಾಂಕ | ಹುದ್ದೆಗಳ ವಿವರ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ಹುದ್ದೆಗಳ ಕೇಂದ್ರ ಕಾರ್ಯಸ್ಥಾನ/ಕಛೇರಿ |
|---|---|---|---|---|---|---|
| 1. | | | ಕಾಇ 106 ಕಾಬಾಸೇ 1998 ದಿನಾಂಕ: 25/09/1998 ಮತ್ತು ಕಾಇ 23 ಕಾಬಾಸೇ 2010, ದಿನಾಂಕ: 01/04/2010 | ಕಾರ್ಖಾನೆಗಳ ಜಂಟಿ ನಿರ್ದೇಶಕರು (ರೂ.20025–28275) | 1 | ಕಾರ್ಖಾನೆಗಳ ಜಂಟಿ ನಿರ್ದೇಶಕರು–2, ಕಛೇರಿ |
| | | | | ಕಾರ್ಖಾನೆಗಳ ಉಪ ನಿರ್ದೇಶಕರು (ರೂ.18150–26925) | 1 | ಮಂಗಳೂರು |

| | | | | | | |
|---|---|---|---|---|---|---|
| | | | | ಕಾರ್ಖಾನೆಗಳ ಉಪ ನಿರ್ದೇಶಕರು (ರೂ.18150–26925) | 1 | ಬೆಳಗಾವಿ |
| | | | | ಬಾಯ್ಲರುಗಳ ಉಪ ನಿರ್ದೇಶಕರು (ರೂ.18150–26925) | 1 | ದಾವಣಗೆರೆ |
| | | | ಕಾಇ 144 ಕಾಬಾಸೇ 97 (I), ದಿನಾಂಕ: 17/01/1998 ಮತ್ತು ಕಾಇ 23 ಕಾಬಾಸೇ 2010, ದಿನಾಂಕ: 01/04/2010 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು (ರೂ.14050–25050) | 1 | ಮಂಗಳೂರು |
| | | | | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು (ರೂ.14050–25050) | 1 | ಬೆಳಗಾವಿ |
| | | | ಕಾಇ 201 ಕಾಬಾಸೇ 98 (II), ದಿನಾಂಕ: 17/01/1998 ಮತ್ತು ಕಾಇ 23 ಕಾಬಾಸೇ 2010, ದಿನಾಂಕ: 01/04/2010 | ಬಾಯ್ಲರುಗಳ ಸಹಾಯಕ ನಿರ್ದೇಶಕರು (ಬಿಟಿಟಿಇಸಿ ಸೆಲ್) (ರೂ. 11400–21600) | 1 | ಬೆಂಗಳೂರು |
| | | | ಕಾಇ 201 ಕಾಬಾಸೇ 1995, ದಿನಾಂಕ: 26/12/1995 ಮತ್ತು ಕಾಇ 23 ಕಾಬಾಸೇ 2010, ದಿನಾಂಕ: 01/04/2010 | ಪ್ರಥಮ ದರ್ಜೆ ಸಹಾಯಕರು (ರೂ.7275–13350) | 1 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಮಂಗಳೂರು. |
| | | | | ಪ್ರಥಮ ದರ್ಜೆ ಸಹಾಯಕರು (ರೂ.7275–13350) | 4 | ಪ್ರಧಾನ ಕಛೇರಿ, ಬೆಂಗಳೂರು. |
| | | | | ಶೀಘ್ರಲಿಪಿಗಾರರು (ರೂ. 7275–13350) | 2 | ಪ್ರಧಾನ ಕಛೇರಿ, ಬೆಂಗಳೂರು. |
| | | | ಕಾಇ 174 ಕಾಬಾಸೇ 1997 ದಿನಾಂಕ: 17/01/1998 ಮತ್ತು ಕಾಇ 23 ಕಾಬಾಸೇ 2010, ದಿನಾಂಕ: 01/04/2010 | ಬೆರಳಚ್ಚುಗಾರರು, (ರೂ.5800–10200) | 1 | ಪ್ರಧಾನ ಕಛೇರಿ, ಬೆಂಗಳೂರು. |
| | | | | ಬೆರಳಚ್ಚುಗಾರರು (ರೂ.5800–10200) | 1 | ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕಛೇರಿ, ಗುಲ್ಬರ್ಗಾ. |
| | | | | ಸೇವಕ, (ರೂ.4800–7275) | 1 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಮಂಗಳೂರು. |
| | | | ಕಾಇ 144 ಕಾಬಾಸೇ 97 (I), ದಿನಾಂಕ: 17/01/1998 ಮತ್ತು ಕಾಇ 23 ಕಾಬಾಸೇ 2010, ದಿನಾಂಕ: 01/04/2010 | ವಾಹನ ಚಾಲಕರು (ರೂ.5800–10200) | 1 | ಪ್ರಧಾನ ಕಛೇರಿ, ಬೆಂಗಳೂರು. |
| | ಮೊತ್ತ | 68.83 | ಒಟ್ಟು ಹುದ್ದೆಗಳು | | 18 | |

| | | | | | |
|---|---|---|---|---|---|
| 2. | (ಲೆಕ್ಕಶೀರ್ಷಿಕೆ: 2230–01–102–0–01–015–ಪೂರಕ ವೆಚ್ಚಗಳು (ಪ್ಲಾನ್) ಮಹಿಳಾ ಹಕ್ಕು ತರಬೇತಿ ಮತ್ತು ಸುರಕ್ಷತಾ ಉಸ್ತುವಾರಿ ಕೇಂದ್ರ | 7.69 | ಕಾಇ 27 ಕಾಬಾಸೇ 2007, ದಿನಾಂಕ: 20/09/2007 ಮತ್ತು ಕಾಇ 23 ಕಾಬಾಸೇ 2010, ದಿನಾಂಕ: 01/04/2010 | ಹುದ್ದೆಗಳು ಯಾವುದೂ ಇರುವುದಿಲ್ಲ. ಆದರೆ ಕಾರ್ಯಕ್ರಮ ಮುಂದುವರೆಸಲು ವಾಹನ ಇತ್ಯಾದಿ ಮೂಲಭೂತ ಸೌಲಭ್ಯಗಳನ್ನು ಒದಗಿಸಿ ತರಬೇತಿ ಕಾರ್ಯಕ್ರಮಗಳ ಹಾಗೂ ಇತರೆ ಪ್ರಾಸಂಗಿಕ ವೆಚ್ಚ ಭರಿಸಲು ಈ ಕೆಳಗಿನಂತೆ ಅನುದಾನ ಹಂಚಿಕೆ ಗುರುತಿಸಿಕೊಂಡಿದೆ: | |
| | | | | 1. 8 ಉಪ ನಿರ್ದೇಶಕರ ಮಟ್ಟದ ನೋಡಲ್ ಅಧಿಕಾರಿಗಳಿಗೆ ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಒದಗಿಸುವ ವೆಚ್ಚ ಭರಿಸಲು | 4.8 |
| | | | | 2. 32 ತರಬೇತಿ ಕಾರ್ಯಕ್ರಮಗಳು ಮತ್ತು 2 ವಿಶೇಷ ತರಬೇತಿ ಕಾರ್ಯಕ್ರಮಗಳಿಗಾಗಿ ತರಬೇತಿ ಸಾಮಗ್ರಿಗಳು, ಉಪಹಾರ, ಗೌರವಧನ, ಇತ್ಯಾದಿ ಪ್ರಾಸಂಗಿಕ ವೆಚ್ಚ ಭರಿಸಲು | 2.89 |
| | | | | ಒಟ್ಟು ವೆಚ್ಚ | 7.69 |
| | ಮೊತ್ತ | 7.69 | | | |
| | | | | | |
| 3. | (ಲೆಕ್ಕಶೀರ್ಷಿಕೆ 2230–01–102–0–01–422 ವಿಶೇಷ ಘಟಕ ಯೋಜನೆ–ಎಸ್‌ಸಿಪಿ) | 2.24 | | ಹುದ್ದೆಗಳು ಯಾವುದೂ ಇರುವುದಿಲ್ಲ. ಆದರೆ ಕಾರ್ಯಕ್ರಮದಲ್ಲಿ ನೋಂದಾಯಿತ ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ಪರಿಶಿಷ್ಟ ಜಾತಿಗೆ ಸೇರಿದ ಕಾರ್ಮಿಕರಿಗೆ ಹಕ್ಕು ಮತ್ತು ಕಾನೂನಿನ ಅರಿವು ಮೂಡಿಸಲು ಹಮ್ಮಿಕೊಳ್ಳುವ ತರಬೇತಿ ಕಾರ್ಯಕ್ರಮಗಳಿಗಾಗಿ ಸಾಮಗ್ರಿಗಳನ್ನು ಖರೀದಿಸಲು, ಉಪಹಾರ ಒದಗಿಸಲು, ಗೌರವಧನ ಪಾವತಿಸಲು, ಕೋರ್ಸ್–ಕೋ–ಆರ್ಡಿನೇಟರ್, ಸಂಪನ್ಮೂಲ ವ್ಯಕ್ತಿಗಳ, ತರಬೇತಿ ಸಾಮಗ್ರಿಗಳ ಸಾಗಣಿಕೆಗೆ ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಒದಗಿಸಲು ಹಾಗೂ ಇತರೆ ಪ್ರಾಸಂಗಿಕ ವೆಚ್ಚ ಭರಿಸಲು | 2.24 |
| | ಮೊತ್ತ | 2.24 | | ಒಟ್ಟು ವೆಚ್ಚ | 2.24 |
| 4. | (ಲೆಕ್ಕ ಶೀರ್ಷಿಕೆ 2230–01–102–0–01–423 ಗಿರಿಜನ ಉಪ ಯೋಜನೆ–ಟಿಎಸ್‌ಪಿ) | 1.24 | | ಹುದ್ದೆಗಳು ಯಾವುದೂ ಇರುವುದಿಲ್ಲ. ಆದರೆ ಕಾರ್ಯಕ್ರಮದಲ್ಲಿ ನೋಂದಾಯಿತ ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ಗಿರಿಜನ ಕಾರ್ಮಿಕರಿಗೆ ಹಕ್ಕು, ಕಾನೂನು ಮತ್ತು ಸೌಲಭ್ಯಗಳ ಬಗ್ಗೆ ಅರಿವು ಮೂಡಿಸಲು ಹಮ್ಮಿಕೊಳ್ಳುವ ತರಬೇತಿ ಕಾರ್ಯಕ್ರಮಗಳಿಗಾಗಿ ಸಾಮಗ್ರಿಗಳನ್ನು ಖರೀದಿಸಲು, ಉಪಹಾರ ಒದಗಿಸಲು, ಗೌರವಧನ ಪಾವತಿಸಲು, ಕೋರ್ಸ್–ಕೋ–ಆರ್ಡಿನೇಟರ್, ಸಂಪನ್ಮೂಲ ವ್ಯಕ್ತಿಗಳ, ತರಬೇತಿ ಸಾಮಗ್ರಿಗಳ ಸಾಗಣಿಕೆಗೆ ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಒದಗಿಸಲು ಹಾಗೂ ಇತರೆ ಪ್ರಾಸಂಗಿಕ ವೆಚ್ಚ ಭರಿಸಲು | 1.24 |
| | ಮೊತ್ತ | 1.24 | | ಒಟ್ಟು ವೆಚ್ಚ | 1.24 |
| | **ಒಟ್ಟು ಮೊತ್ತ** | **80.00** | | **ಯೋಜನೆಯ ಒಟ್ಟು ವೆಚ್ಚ** | **80.00** |

ಬಿ. ಶಿವರಾಮ ಗೌಡ
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ
(ಕಾರ್ಖಾನೆ ಮತ್ತು ಬಾಯ್ಲರುಗಳು)

ಪಿ.ಆರ್. 1080

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕೊಪ್ಪ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ಮೊತ್ತ ರೂ.1250.00 ಲಕ್ಷಗಳ ವೆಚ್ಚದಲ್ಲಿ ಕಲ್ಪಿಸಲು ತಾತ್ವಿಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ:ಕಜಮಂ:ತಾಂತ್ರಿಕ/ಕೊಪ್ಪ–ಒ.ಚ.ಯೋ/3681/2010–11, ದಿನಾಂಕ: 21/01/2011.

**ಪ್ರಸ್ತಾವನೆ :**

ಕೊಪ್ಪ ಪಟ್ಟಣವು ಚಿಕ್ಕಮಗಳೂರು ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯ ಪ್ರಕಾರ 5113 ಇದ್ದು, ಪ್ರಸ್ತುತ ಜನಸಂಖ್ಯೆಯು 6000 ಇರುತ್ತದೆ.

ಪ್ರಸ್ತುತ ಕೊಪ್ಪ ಪಟ್ಟಣಕ್ಕೆ ತುಂಗಾ ನದಿಯಿಂದ ನೀರು ಸರಬರಾಜು ಮಾಡುತ್ತಿದ್ದು, ದಿನಂಪ್ರತಿ 1.66 ದಶಲಕ್ಷ ಲೀಟರ್ ಸಾಮರ್ಥ್ಯದ ನೀರು ಸರಬರಾಜು ಯೋಜನೆಯನ್ನು 2003ರಲ್ಲಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗಿದೆ. ಸದರಿ ಯೋಜನೆಯನ್ನು 2030ಕ್ಕೆ ನಿರೀಕ್ಷಿಸಿದ 8000 ಜನಸಂಖ್ಯೆಗೆ ವಿನ್ಯಾಸಿಸಿ, ಯೋಜನೆಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು 10 ಡಿಸೆಂಬರ್ 2009ರಲ್ಲಿ ಪೂರ್ಣಗೊಳಿಸಲಾಗಿದೆ. ಪ್ರಸ್ತುತ ಪಟ್ಟಣಕ್ಕೆ ತಲಾ ದಿನಂಪ್ರತಿ 135 ಲೀಟರಿನಂತೆ ನೀರು ಸರಬರಾಜು ಮಾಡುತ್ತಿದ್ದು, ನೀರು ಸರಬರಾಜು ನಿರ್ವಹಣೆಯನ್ನು ಕೊಪ್ಪ ಪಟ್ಟಣ ಪಂಚಾಯ್ತಿ ವತಿಯಿಂದ ಮಾಡಲಾಗುತ್ತಿದೆ.

ಕೊಪ್ಪ ಪಟ್ಟಣದಲ್ಲಿ ಹಾಲಿ ಯಾವುದೇ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಮನೆಗಳಿಂದ ಹಾಗೂ ಸಾರ್ವಜನಿಕ ಕಟ್ಟಡಗಳಿಂದ ವಿಸರ್ಜಿಸಲ್ಪಟ್ಟ ತ್ಯಾಜ್ಯ ನೀರು, ಮಳೆ ನೀರು ಎಲ್ಲವೂ ತೆರೆದ ಚರಂಡಿಗಳಲ್ಲಿ ಹರಿಯುತ್ತಿದ್ದು, ಪಟ್ಟಣದ ಪರಿಸರವು ಹಾಳಾಗುತ್ತಿದೆ. ಆದುದರಿಂದ, ಸದರಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಯೋಜನೆಯನ್ನು ರೂಪಿಸಲಾಗಿದೆ.

ಯೋಜನೆಯ ಅಂದಾಜನ್ನು 2010–11ನೇ ಸಾಲಿನ ಮಂಡಳಿಯ, ಸಣ್ಣ ನೀರಾವರಿ ಇಲಾಖೆ, ಮೈಸೂರು ವೃತ್ತ ಹಾಗೂ ಹಾಸನ ವೃತ್ತದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ದರಪಟ್ಟಿಗಳನ್ವಯ ರೂ.1250.00 ಲಕ್ಷಗಳಿಗೆ ತಯಾರಿಸಿ, ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಆಡಳಿತಾತ್ಮಕ ಅನುಮೋದನೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | | | |
|---|---|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ.50) | ರೂ. | 625.00 | ಲಕ್ಷಗಳು |
| ಸರ್ಕಾರದ ಸಾಲ (ಶೇ.30) | ರೂ. | 375.00 | ಲಕ್ಷಗಳು |
| ಕೊಪ್ಪ ಪಟ್ಟಣ ಪಂಚಾಯ್ತಿ ವಂತಿಕೆ (ಶೇ.20) | ರೂ. | 250.00 | ಲಕ್ಷಗಳು |
| ಒಟ್ಟು | ರೂ. | 1250.00 | ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2010–11ನೇ ಸಾಲಿನ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ ಸೇರಿಸಿ, ರೂ.420.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 03 ಯುಡಿಎಸ್ 2011 ಬೆಂಗಳೂರು, ದಿನಾಂಕ: 31/03/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ.1250.00 ಲಕ್ಷಗಳಲ್ಲಿ (ರೂ.ಒಂದು ಸಾವಿರದ ಇನ್ನೂರ ಐವತ್ತು ಲಕ್ಷಗಳು ಮಾತ್ರ) ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಳಚರಂಡಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ತಾತ್ವಿಕವಾಗಿ ಸರ್ಕಾರದ ಅನುಮೋದನೆಯನ್ನು ನೀಡಿದೆ.

1. The Escalation charges should not form part of the estimate. It should be borne by the concerned ULB. The estimate should be reduced to such extent.
2. ETP & contingencies to be restricted to 5%.
3. The consent of the ULB shall be obtained for the extra cost that might occur due to deviations, extra item works or variations in the Scheme.
4. Adequate provision to be made by the Board in the following years for timely completion of the project.
5. Escalations and Tender premium over and above the approved estimate cost should be approved with the prior consent of the ULB.
6. Water rates as proposed by KUWS&DB have to be implemented to meet O & M cost of UGD.
7. KTPP provisions, quality control and timely completion should ensured.
8. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
9. ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 89 Exp-9:2011, ದಿನಾಂಕ: 05/03/2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1081

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಹೊನ್ನಾಳ್ಳಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ.3000.00 ಲಕ್ಷಗಳಲ್ಲಿ ಕಲ್ಪಿಸಲು ತಾತ್ವಿಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ:ಕಜಮಂ:ಮುಅ/ಆಶ್ರೇಕಾಅ(ಬೆಂ)/ತಾಸ-8/ಸಅ-8/ಹೊ-ಒ.ಚ.ಯೋ/3756/ 2010-11, ದಿನಾಂಕ:29/01/2011.

**ಪ್ರಸ್ತಾವನೆ :**

ಹೊನ್ನಾಳ್ಳಿ ಪಟ್ಟಣವು ದಾವಣಗೆರೆ ಜಿಲ್ಲೆಯ ಒಂದು ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯ ಪ್ರಕಾರ 15,568 ಹಾಗೂ ಪ್ರಸ್ತುತ 16,450 ಇರುತ್ತದೆ. ಈ ಪಟ್ಟಣದ ಜನಸಂಖ್ಯೆಯು 2026ರಲ್ಲಿ 30,000 ಮತ್ತು 2041ರಲ್ಲಿ 45,000 ಆಗಬಹುದೆಂದು ಅಂದಾಜಿಸಲಾಗಿದೆ.

2. ಈ ಪಟ್ಟಣ್ಣಕ್ಕೆ ತುಂಗಭದ್ರಾ ನದಿ ಮೂಲದಿಂದ 1996ರಲ್ಲಿ ಜಿಲ್ಲಾ ಪಂಚಾಯತ್‌ವತಿಯಿಂದ ಕಾರ್ಯಗತವಾದ 0.9 ಎಂ.ಎಲ್.ಡಿ., ಸಾಮರ್ಥ್ಯದ ಯೋಜನೆಯಿಂದ ಹಾಗೂ ತುಂಗಭದ್ರಾ ನದಿ ಮೂಲದಿಂದ 2009ರಲ್ಲಿ ಚಾಲನೆಗೊಳಿಸಿದ 4.68 ಎಂ.ಎಲ್.ಡಿ., ಸಾಮರ್ಥ್ಯದ ನೀರು ಸರಬರಾಜು ಯೋಜನೆಯಿಂದ ಕುಡಿಯುವ ನೀರು ಸರಬರಾಜು ಮಾಡಲಾಗುತ್ತಿದೆ. ಈ ಯೋಜನೆಯನ್ನು 2031ರಲ್ಲಿ ಅಂದಾಜಿಸಲಾದ 46,800 ಜನಸಂಖ್ಯೆಗೆ ತಲಾ ದಿನಂಪ್ರತಿ 100 ಲೀಟರ್‌ನಂತೆ ಸರಬರಾಜು ಮಾಡಲು ವಿನ್ಯಾಸಿಸಲಾಗಿದ್ದು, ಈ ಯೋಜನೆಯಿಂದ ಮತ್ತು ಕೊಳವೆ ಬಾವಿಗಳಿಂದ ತಲಾ ದಿನಂಪ್ರತಿ ಒಟ್ಟು ಸುಮಾರು 135 ಲೀಟರ್ ನೀರು ಸರಬರಾಜು ಮಾಡಬಹುದಾಗಿರುತ್ತದೆ. ಪ್ರಸ್ತುತ ನೀರು ಸರಬರಾಜು ನಿರ್ವಹಣೆಯನ್ನು ಪಟ್ಟಣ ಪಂಚಾಯತಿ ನಿರ್ವಹಿಸುತ್ತಿದೆ.

3. ಪ್ರಸ್ತುತ ಪಟ್ಟಣದಲ್ಲಿ ಯಾವುದೇ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಹೆಚ್ಚಿನ ಮನೆಯವರು ಸೋಕ್‌ಪಿಟ್‌ಗಳ ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಕೆಲವು ಪ್ರದೇಶಗಳಲ್ಲಿ ಮಲಿನ ನೀರನ್ನು ತೆರೆದ ಚರಂಡಿಗಳಿಗೆ ಹರಿದು ಬಿಡುತ್ತಿದ್ದು, ನೈರ್ಮಲ್ಯ ಸಮಸ್ಯೆ ಉಂಟಾಗುತ್ತಿದ್ದು, ಸಾರ್ವಜನಿಕರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತಿರುತ್ತದೆ. ಆದ್ದರಿಂದ, ಶಾಶ್ವತ ಪರಿಹಾರವನ್ನು ನೀಡುವ ಸಲುವಾಗಿ ಒಳಚರಂಡಿ ವ್ಯವಸ್ಥೆ ಕಲ್ಪಿಸುವುದು ಅನಿವಾರ್ಯವಾಗಿರುತ್ತದೆ.

4. ಅದರಂತೆ, 2010-11ನೇ ಸಾಲಿನ ಮಂಡಳಿ ಹಾಗೂ ಲೋಕೋಪಯೋಗಿ ಇಲಾಖೆಯ ದರಪಟ್ಟಿಯನ್ನಾಧರಿಸಿ ರೂ.3000.00 ಲಕ್ಷಗಳ ಅಂದಾಜಿನಲ್ಲಿ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಮೇಲೆ ಓದಲಾದ ಪತ್ರದಲ್ಲಿ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| ಕ್ರಮ ಸಂಖ್ಯೆ | ವಿವರ | ಮೊತ್ತ |
|---|---|---|
| 1. | ಸರ್ಕಾರದಿಂದ ಸಾಲ (ಶೇ.30) | ರೂ. 900.00 ಲಕ್ಷಗಳು |
| 2. | ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ.50) | ರೂ. 1500.00 ಲಕ್ಷಗಳು |
| 3. | ಸ್ಥಳೀಯ ಸಂಸ್ಥೆ ಕೊಡುಗೆ (ಶೇ.20) | ರೂ. 600.00 ಲಕ್ಷಗಳು |
| | **ಒಟ್ಟು** | ರೂ. 3000.00 ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2010-11ನೇ ಸಾಲಿನ ಪರಿಷ್ಕೃತ ಕ್ರಿಯಾ ಯೋಜನೆಯ ಪ್ರವರ್ಗ-ಡಿ ಯಡಿಯಲ್ಲಿ ಸೇರಿಸಿ, ರೂ. 734.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 01 ಯುಡಿಎಸ್ 2011 ಬೆಂಗಳೂರು, ದಿನಾಂಕ 31-03-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಹೊನ್ನಾಳ್ಳಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ.3000.00 ಲಕ್ಷಗಳಲ್ಲಿ (ರೂ. ಮೂರು ಸಾವಿರ ಲಕ್ಷಗಳು ಮಾತ್ರ) ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು **ಒಳಚರಂಡಿ ಯೋಜನೆಯಡಿ** ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ತಾತ್ವಿಕವಾಗಿ ಸರ್ಕಾರದ ಅನುಮೋದನೆಯನ್ನು ನೀಡಿದೆ.

1. The Escalation charges should not form part of the estimate. It should be borne by the concerned ULB. The estimate should be reduced to such extent.
2. ETP & contingencies to be restricted to 5%.
3. The consent of the ULB shall be obtained for the extra cost that might occur due to deviations, extra item works or variations in the Scheme.
4. Adequate provision to be made by the Board in the following years for timely completion of the project.
5. Escalations and Tender premium over and above the approved estimate cost should be approved with the prior consent of the ULB.

6. Water rates as proposed by KUWS&DB have to be implemented to meet O & M cost of UGD.
7. KTPP provisions, quality control and timely completion should ensured.
8. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
9. ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: FD 105 Exp-9:2011, ದಿನಾಂಕ: 04/03/2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 1082

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Approval of the Project proposal of M/s Brigade Estates & Projects P Limited to establish "IT/ITES SEZ with an Independent Township project at KIADB Indl Area, Devanahalli Tq Bangalore Rural District.

**Read :** Proceedings of the 24th State High Level Clearance Committee (SHLCC) meeting held on 24-1-2011.

**PREAMBLE :**

M/s Brigade Estates & Projects P Limited has proposed to establish ""IT/ITES SEZ with an Independent Township project at KIADB Indl Area, Devanahalli Tq Bangalore Rural District at a cost of Rs. 1233.36 crores.

In the proposal submitted for the 24th State High Level Clearance Committee (SHLCC) meeting held on 24-1-2011, the Company had requested to approve the project The project proposes to provide employment to about 26000 persons.

The State High Level Clearance Committee, after detailed discussion, approved the proposal of M/s Brigade Estates & Projects P Limited and recommended to grant infrastructure facilities and extend incentives and concessions.

Hence the following order :

**GOVERNMENT ORDER NO. ITD 03 MDA 2011 (1), BANGALORE, DATED : 25-3-2011**

In the circumstances explained in the Preamble, Government are pleased to accord approval in-principle to establish "IT/ITES SEZ with an Independent Township project by the company at KIADB Indl Area, Devanahalli Tq Bangalore Rural District at a cost of Rs. 1233.36 crores with following conditions and extended the infrastructure facilities, incentives and concessions,.

**INFRASTRUCTURE FACILITIES :**

**LAND :** The Company is permitted to establish the project in 25 Acres of KIADB land at KIADB Indl. Area, Devanahalli Tq Bangalore Rural District.

**POWER :** 30000 KVA to be serviced by BESCOM.

**WATER :** 500 KLPD to be supplied by BWSSB.

**INCENTIVES & CONCESSIONS :** As per Millennium IT Policy and SEZ policy.

**Conditions :**

a) The allocation of water for the project from the reservoirs will not be considered. The project proponents to explore the possibility of drawing water from downstream of the reservoirs, subject to approval of water Resources Department. The Project proponents will furnish the exact drawl point to WRD for further examination and consideration.
b) The project proponents shall adopt rain water harvesting waste water adopt rain water harvesting, waste water recycling and water conservation facilities. Wherever applicable, Zero discharge facility should be adopted.
c) The project proponents shall take necessary statutory clearances and plan approvals from the competent authorities before stating the project.
d) The project proponents shall provide a plan for development of human resource required for the project, and to train and provide employment to local people as per Dr. Sarojini Mahishi report and as per the respective policies of the State Government.
e) Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units.
f) The project implementation time for the proposal is 3 years, which is considered from the date of allotment of land by KIADB.

**Others :**

The Promoter shall submit milestones/progress in implementation of the project regularly, which will be monitored by the Departments concerned.

By Order and in the name of the Governor of Karnataka

**K. Borlingaiah**

P.R. 1091

Under Secretary to Government (I/C),
Information Technology, Biotechnology and
Science and Technology Department.

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Approval of the Project proposal of M/s Tally Solutions P Limited to establish "R&D for Software Development" project at Harohalli Indl Area, Ramnagar District.

**Read :** Proceedings of the 24th State High Level Clearance Committee (SHLCC) meeting held on 24-1-2011.

**PREAMBLE :**

M/s Tally Solutions P Limited has proposed to establish "R&D for Software Development" project at Harohalli Indl Area, Ramnagar District at a cost of Rs. 71.50 crores.

In the proposal submitted for the 24th State High Level Clearance Committee (SHLCC) meeting held on 24-1-2011, the Company had requested to approve the project The project proposes to provide employment to about 1000 persons.

The State High Level Clearance Committee, after detailed discussion, approved the proposal of M/s Tally Solutions P Limited and recommended to grant infrastructure facilities and extend incentives and concessions.

Hence the following order :

**GOVERNMENT ORDER NO. ITD 03 MDA 2011 (2), BANGALORE, DATED : 25-3-2011**

In the circumstances explained in the Preamble, Government are pleased to accord approval in-principle to establish "R&D for Software Development" project by the Company at Harohalli Indl Area, Ramanagar District at a cost of Rs. 71.50 crores with following conditions and extended the infrastructure facilities, incentives and concessions,.

**INFRASTRUCTURE FACILITIES :**

**LAND :** The Company is permitted to establish the project in 10 Acres of land to be allotted by KIADB at 3rd phase, Harohalli Indl Area, Ramanagar District.

**POWER :** 500 KVA to be serviced by BESCOM.

**WATER :** 100 KLPD to be supplied by KIADB.

**INCENTIVES & CONCESSIONS :**

As per Millennium IT Policy of the State.

**Conditions :**

a) The allocation of water for the projects from the reservoirs will not be considered. The project proponents to explore the possibility of drawing water from downstream of the reservoirs, subject to approval of water Resources Department. The Project proponents will furnish the exact drawl point to WRD for further examination and consideration.
b) The project proponents shall adopt rain water harvesting waste water adopt rain water harvesting, waste water recycling and water conservation facilities. Wherever applicable, Zero discharge facility should be adopted.
c) The project proponents shall take necessary statutory clearances and plan approvals from the competent authorities before stating the project.
d) The project proponents shall provide a plan for development of human resource required for the project, and to train and provide employment to local people as per Dr. Sarojini Mahishi report and as per the respective policies of the State Government.
e) Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units.
f) Wherever land acquisition through KIADB is proposed the project proponents shall provide employment for at least one member of the family of each land user.
g) The project implementation time for the proposal is 2 years, which is considered from the date of allotment of land by KIADB.

**Others :**

The Promoter shall submit milestones/progress in implementation of the project regularly, which will be monitored by the Departments concerned.

By Order and in the name of the Governor of Karnataka

**K. Borlingaiah**

P.R. 1092

Under Secretary to Government (I/C),
Information Technology, Biotechnology and
Science and Technology Department.

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Approval of the Project proposal of M/s Tally Solutions P Limited to establish "Global Training Centre for Software Development" project at IT Park Devanahalli Taluk Bangalore Rural District.

**Read :** Proceedings of the 24th State High Level Clearance Committee (SHLCC) meeting held on 24-1-2011.

**PREAMBLE :**

M/s Tally Solutions P Limited has proposed to establish "Global Training Centre for Software Development" project at IT Park Devanahalli Taluk Bangalore Rural District at a cost of Rs. 62.50 crores.

In the proposal submitted for the 24th State High Level Clearance Committee (SHLCC) meeting held on 24-1-2011, the Company had requested to approve the project The project proposes to provide employment to about 1000 persons.

The State High Level Clearance Committee, after detailed discussion, approved the proposal of M/s Tally Solutions P Limited and recommended to grant infrastructure facilities and extend incentives and concessions.

Hence the following order :

**GOVERNMENT ORDER NO. ITD 03 MDA 2011 (3), BANGALORE, DATED : 25-3-2011**

In the circumstances explained in the Preamble, Government are pleased to accord approval in-principle to establish "Global Training Centre for Software Development" project by the company at IT Park Devanahalli Taluk, Bangalore Rural District at a cost of Rs. 62.50 crores with following conditions and extended the infrastructure facilities, incentives and concessions,.

**INFRASTRUCTURE FACILITIES :**

**LAND :** The Company is permitted to establish the project in 05 Acres of land to be allotted by KIADB at IT Park Devanahalli Taluk Bangalore Rural District.

**POWER :** 500 KVA to be serviced by BESCOM.

**WATER :** 100 KLPD to be supplied by KIADB.

**INCENTIVES & CONCESSIONS :**

As per Millennium IT Policy of the State.

**Conditions :**

a) The allocation of water for the projects from the reservoirs will not be considered. The project proponents to explore the possibility of drawing water from downstream of the reservoirs, subject to approval of water Resources Department. The Project proponents will furnish the exact drawl point to WRD for further examination and consideration.

b) The project proponents shall adopt rain water harvesting waste water adopt rain water harvesting, waste water recycling and water conservation facilities. Wherever applicable, Zero discharge facility should be adopted.

c) The project proponents shall take necessary statutory clearances and plan approvals from the competent authorities before stating the project.

d) The project proponents shall provide a plan for development of human resource required for the project, and to train and provide employment to local people as per Dr. Sarojini Mahishi report and as per the respective policies of the State Government.

e) Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units.

f) Wherever land acquisition through KIADB is proposed the project proponents shall provide employment for at least one member of the family of each land user.

g) The project implementation time for the proposal is 2 years, which is considered from the date of allotment of land by KIADB.

**Others :**

The Promoter shall submit milestones/progress in implementation of the project regularly, which will be monitored by the Departments concerned.

By Order and in the name of the Governor of Karnataka

**K. Borlingaiah**

Under Secretary to Government (I/C),
Information Technology, Biotechnology and
Science and Technology Department.

P.R. 1093

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Approval of the Project proposal of M/s Rathnamahal Properties & Developers to establish "Software Development Park" project at Sy No. 43, Hunasamaranahalli, Jala Hobli, Near Yelahanka, Bangalore North Taluk.

**Read :** Proceedings of the 24th State High Level Clearance Committee (SHLCC) meeting held on 24-1-2011.

**PREAMBLE :**

M/s Rathnamahal Properties & Developers has proposed to establish "Software Development Park" project at Sy No. 43, Hunasamaranahalli, Jala Hobli, Near Yelahanka, Bangalore North Tq at a cost of Rs. 369 crores.

In the proposal submitted for the 24th State High Level Clearance Committee (SHLCC) meeting held on 24-1-2011, the Company had requested to approve the project The project proposes to provide employment to about 4650 persons.

The State High Level Clearance Committee, after detailed discussion, approved the proposal of M/s Rathnamahal Properties & Developers and recommended to grant infrastructure facilities and extend incentives and concessions.

Hence the following order :

**GOVERNMENT ORDER NO. ITD 03 MDA 2011 (4), BANGALORE, DATED : 25-3-2011**

In the circumstances explained in the Preamble, Government are pleased to accord approval in-principle to establish "Software Development Park" project by the company at Sy No. 43, Hunasamaranahalli, Jala Hobli, Near Yelahanka, Bangalore North Tq at a cost of Rs. 369 crores with following conditions and extended the infrastructure facilities, incentives and concessions,.

**INFRASTRUCTURE FACILITIES :**

**LAND :** The Company is permitted to establish the project in 07 Acres 31 guntas of land at Sy. No. 43, Hunasamaranahalli, Jala Hobli, Near Yelahanka, Bangalore North Tq to be purchased U/s 109 of KLR Act subject to obtaining change of land use and conversion of the same for Industrial use.

**POWER :** 6250 KVA to be serviced by BESCOM.

**WATER :** 500 KLPD to be supplied by BWSSB.

**INCENTIVES & CONCESSIONS :**

As per Millennium IT Policy of the State.

**Conditions :**

a) The allocation of water for the project from the reservoirs will not be considered. The project proponents to explore the possibility of drawing water from downstream of the reservoirs, subject to approval of water Resources Department. The Project proponents will furnish the exact drawl point to WRD for further examination and consideration.

b) The project proponents shall adopt rain water harvesting waste water adopt rain water harvesting, waste water recycling and water conservation facilities. Wherever applicable, Zero discharge facility should be adopted.

c) The project proponents shall take necessary statutory clearances and plan approvals from the competent authorities before stating the project.

d) The project proponents shall provide a plan for development of human resource required for the project, and to train and provide employment to local people as per Dr. Sarojini Mahishi report and as per the respective policies of the State Government.

e) Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units.

**f)** The project implementation time for the proposal is 3 years, which is considered from the date of obtaining permission U/s 109 of KLR Act from the Deputy Commissioner/Government as the case may be.

**Others :**

The Promoter shall submit milestones/progress in implementation of the project regularly, which will be monitored by the Departments concerned.

By Order and in the name of the Governor of Karnataka

**K. Borlingaiah**

Under Secretary to Government (I/C),

Information Technology, Biotechnology and

Science and Technology Department.

P.R. 1094

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಹೆಚ್ಚುವರಿ ಶಿಕ್ಷಕರನ್ನು ಮತ್ತು ಹೆಚ್ಚುವರಿ ಖಾಲಿ ಹುದ್ದೆಗಳನ್ನು ಗುರುತಿಸಿ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ : ಸಿ3 (1) ಪ್ರಾ.ಶಿ.ಹೆಚ್ಚು1/2010-11, ದಿನಾಂಕ : 28-03-2011.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 23-03-2011ರ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಉತ್ತಮ ಗುಣಮಟ್ಟದ ಕಲಿಕೆ ಸಾಧಿಸಲು ಮಕ್ಕಳ ಶಿಕ್ಷಕರ ಅನುಪಾತಕ್ಕೆ ಅನುಗುಣವಾಗಿ ಶಿಕ್ಷಕರನ್ನು ಸ್ಥಳ ನಿಯುಕ್ತಿ ಮಾಡುವುದು ತೀರ ಅಗತ್ಯ ಕ್ರಮವಾಗಿದೆ. ಈಶಾನ್ಯ ವಲಯದ ಜಿಲ್ಲೆಗಳಲ್ಲಿ ಶಿಕ್ಷಕರ:ಮಕ್ಕಳ ಅನುಪಾತ ಇತರೆ ಜಿಲ್ಲೆಗಳಿಗಿಂತ ಜಾಸ್ತಿಯಿದ್ದು, ಇತರೆ ಜಿಲ್ಲೆಯೊಳಗಿನ ಕೆಲವು ತಾಲ್ಲೂಕುಗಳಲ್ಲೂ ಈ ಅಸಮಾನತೆ ಇರುವುದು ಕಂಡುಬಂದಿದೆ. ಮಕ್ಕಳ ಮತ್ತು ಶಿಕ್ಷಕರ ಅನುಪಾತದ ಅಸಮಾನತೆಯನ್ನು ಸರಿದೂಗಿಸಲು ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಹೆಚ್ಚುವರಿ ಶಿಕ್ಷಕರನ್ನು ಗುರುತಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

2. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಹೆಚ್ಚುವರಿ ಶಿಕ್ಷಕರನ್ನು ಮತ್ತು ಹೆಚ್ಚುವರಿ ಖಾಲಿ ಹುದ್ದೆಗಳನ್ನು ಗುರುತಿಸಲು ನಿರ್ಧಿಷ್ಟ ಮಾನದಂಡ ನಿಗದಿಪಡಿಸಲು ನಿರ್ಧರಿಸಿದೆ. ಅದರಂತೆ, ಈ ಕೆಳಕಂಡ ಆದೇಶ ಹೊರಡಿಸಲು ಉದ್ದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 644 ಪಿಬಿಎಸ್ 2010, ಬೆಂಗಳೂರು, ದಿನಾಂಕ: 01-04-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಹೆಚ್ಚುವರಿ ಶಿಕ್ಷಕರನ್ನು ಮತ್ತು ಹೆಚ್ಚುವರಿ ಖಾಲಿ ಹುದ್ದೆಗಳನ್ನು ಗುರುತಿಸಲು ಈ ಕೆಳಕಾಣಿಸಿದ ಮಾನದಂಡಗಳನ್ನು ನಿಗದಿಪಡಿಸಲಾಗಿದೆ.

| ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ | | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ | | ಷರಾ |
|---|---|---|---|---|
| ವಿದ್ಯಾರ್ಥಿಗಳ ಸಂಖ್ಯೆ | ಅಗತ್ಯ ಶಿಕ್ಷಕರ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ | ಅಗತ್ಯ ಶಿಕ್ಷಕರ ಸಂಖ್ಯೆ | |
| 11 ರಿಂದ 30 | 02 | 90 ರವರೆಗೆ | 04 | |
| 31 ರಿಂದ 50 | 03 | 91 ರಿಂದ 120 | 05 | ಒಬ್ಬರು ಆಂಗ್ಲ ಭಾಷಾ ಶಿಕ್ಷಕರು |
| 51 ರಿಂದ 90 | 04 | 121 ರಿಂದ 160 | 06 | ಮುಖ್ಯ ಶಿಕ್ಷಕರು-1<br>ವಿಜ್ಞಾನ ಶಿಕ್ಷಕರು-1 |
| 91 ರಿಂದ 120 | 05 (ಆಂಗ್ಲ ಶಿಕ್ಷಕರು-1) | 161 ರಿಂದ 200 | 07 | |
| 121 ರಿಂದ 180 | 06 | 201 ರಿಂದ 240 | 08 | ಹಿಂದಿ ಶಿಕ್ಷಕರು-1<br>ದೈಹಿಕ ಶಿಕ್ಷಕರು-1 |
| 181ರ ನಂತರ ಪ್ರತಿ 30 ಮಕ್ಕಳಿಗೆ 1:30ರ ಅನುಪಾತದಲ್ಲಿ ಮತ್ತೊಬ್ಬ ಶಿಕ್ಷಕರು | | 241 ರಿಂದ 270 | 09 | ಸಂಗೀತ/ಚಿತ್ರಕಲೆ ಶಿಕ್ಷಕರು-1 |
| | | 271 ರಿಂದ 300 | 10 | |
| | | 301ರ ನಂತರ ಪ್ರತಿ 30 ಮಕ್ಕಳಿಗೆ 1:30ರ ಅನುಪಾತದಲ್ಲಿ ಮತ್ತೊಬ್ಬ ಶಿಕ್ಷಕರು | | |

2. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ 91 ಕ್ಕಿಂತ ಹೆಚ್ಚು ಮಕ್ಕಳಿದ್ದಲ್ಲಿ ಒಂದು ಆಂಗ್ಲ ಭಾಷಾ ಶಿಕ್ಷಕರ ಹುದ್ದೆ, 121 ಕ್ಕಿಂತ ಹೆಚ್ಚು ಮಕ್ಕಳಿದ್ದಲ್ಲಿ ಒಂದು ವಿಜ್ಞಾನ ಶಿಕ್ಷಕರ ಹುದ್ದೆ, 200 ಕ್ಕಿಂತ ಹೆಚ್ಚು ಮಕ್ಕಳಿದ್ದಲ್ಲಿ ಒಂದು ಹಿಂದಿ ಶಿಕ್ಷಕರ ಹುದ್ದೆ ಹಾಗೂ ದೈಹಿಕ ಶಿಕ್ಷಕರ ಹುದ್ದೆ ನಿಗದಿಪಡಿಸಲಾಗಿದೆ. 240ಕ್ಕಿಂತ ಹೆಚ್ಚು ಮಕ್ಕಳಿದ್ದಲ್ಲಿ ಸಂಗೀತ ಅಥವಾ ಚಿತ್ರಕಲಾ ಶಿಕ್ಷಕರ ಹುದ್ದೆ ನಿಗದಿಪಡಿಸಲಾಗಿದೆ.

3. ಭಾಷಾ ಅಲ್ಪಸಂಖ್ಯಾತರ ಶಾಲೆಗಳಲ್ಲಿ ರಾಷ್ಟ್ರೀಯ ಸಾಕ್ಷರತೆಯ ಸರಾಸರಿಗಿಂತ ಕಡಿಮೆ ಸಾಕ್ಷರತಾ ಪ್ರಮಾಣ ಹೊಂದಿರುವ ತಾಲ್ಲೂಕುಗಳ ಶಾಲೆಗಳಲ್ಲಿ ಮತ್ತು ಮಲೆನಾಡು ಪ್ರದೇಶದ ಶಾಲೆಗಳಲ್ಲಿ ಈ ಕೆಳಕಂಡ ಅನುಪಾತದಲ್ಲಿ ಅನುಸರಿಸಿ ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ಸಂಖ್ಯೆಯನ್ನು ಲೆಕ್ಕ ಹಾಕಿ ಕ್ರಮ ತೆಗೆದುಕೊಳ್ಳುವುದು.

| ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ | | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ | |
|---|---|---|---|
| ವಿದ್ಯಾರ್ಥಿಗಳ ಸಂಖ್ಯೆ | ಅಗತ್ಯ ಶಿಕ್ಷಕರ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ | ಅಗತ್ಯ ಶಿಕ್ಷಕರ ಸಂಖ್ಯೆ |
| 01 ರಿಂದ 50 | 02+1 ಕನ್ನಡ | 15-75 | 04+1 ಕನ್ನಡ * |
| 51 ರಿಂದ 100 | 03+1 ಕನ್ನಡ | 75-130 | 05+1 ಕನ್ನಡ * |
| 101 ರಿಂದ 150 | 04+1 ಕನ್ನಡ | 131-180 | 06+1 ಕನ್ನಡ * |
| 151 ರಿಂದ 180 | 05+1 ಕನ್ನಡ | | |
| 181ರ ನಂತರ ಕನ್ನಡ ಶಿಕ್ಷಕರನ್ನು ಹೊರತುಪಡಿಸಿ ಪ್ರತಿ 25:1ರ ಅನುಪಾತದಲ್ಲಿ ಮತ್ತೊಬ್ಬ ಶಿಕ್ಷಕರು | | 181ರ ನಂತರ ಕನ್ನಡ ಶಿಕ್ಷಕರನ್ನು ಹೊರತುಪಡಿಸಿ ಪ್ರತಿ 25:1ರ ಅನುಪಾತದಲ್ಲಿ ಮತ್ತೊಬ್ಬ ಶಿಕ್ಷಕರು | |

**ವಿಶೇಷ ಸೂಚನೆ :** * ಕನ್ನಡ ಶಿಕ್ಷಕರು ಭಾಷಾ ಅಲ್ಪಸಂಖ್ಯಾತ ಶಾಲೆಗಳಲ್ಲಿ ಮಾತ್ರ.

4. ಹೆಚ್ಚುವರಿ ಶಿಕ್ಷಕರನ್ನು ಗುರುತಿಸುವಾಗ ಈ ಕೆಳಕಾಣಿಸಿದಂತೆ ವಿನಾಯಿತಿ ನೀಡುವುದು.

1. ಮೇ 31ರಲ್ಲಿದಂತೆ ಮುಂದಿನ 2 ಶೈಕ್ಷಣಿಕ ವರ್ಷಗಳಲ್ಲಿ ನಿವೃತ್ತರಾಗಲಿರುವ ಶಿಕ್ಷಕರು.
2. ಸರ್ವ ಶಿಕ್ಷಣ ಅಭಿಯಾನದ ಕಾರ್ಯಕ್ರಮದಡಿ ಕೆಲಸ ಮಾಡುತ್ತಿರುವ ಶಿಕ್ಷಕರು.
3. ಶೇಕಡಾ 40ಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿರುವ ಶಿಕ್ಷಕರು.
4. ಹೆಚ್ಚುವರಿ ಶಿಕ್ಷಕರಲ್ಲಿ ಒಬ್ಬರು ದೈಹಿಕ ಶಿಕ್ಷಣ ಶಿಕ್ಷಕರಾಗಿದ್ದು, ಜಿಲ್ಲೆಯೊಳಗೆ ದೈಹಿಕ ಶಿಕ್ಷಣ ಶಿಕ್ಷಕರ ಅವಶ್ಯಕತೆಯಿರುವ ಬೇರೆ ಶಾಲೆಗಳು ಇಲ್ಲವಾದಲ್ಲಿ.
5. 2001ರ ನಂತರ ಹಿರಿಯ ಪ್ರಾಥಮಿಕ ಶಾಲೆಗಳಿಗೆ ನೇಮಕವಾಗಿರುವ ಇಂಗ್ಲೀಷ್, ವಿಜ್ಞಾನ ಅಥವಾ ಹಿಂದಿ ವಿಷಯದ ಶಿಕ್ಷಕರಾಗಿದ್ದು, ಸದರಿ ಶಾಲೆಯಲ್ಲಿ ಅಗತ್ಯ ಮಕ್ಕಳ ಸಂಖ್ಯೆ ಇದ್ದಲ್ಲಿ.
6. ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ರಾಜ್ಯ ಮತ್ತು ತಾಲ್ಲೂಕು ಮಟ್ಟದ ಚುನಾಯಿತ ಪದಾಧಿಕಾರಿಗಳಾದ ಅಧ್ಯಕ್ಷರು, ಉಪಾಧ್ಯಕರು, ಖಜಾಂಚಿ, ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ, ಸಂಘಟನಾ ಕಾರ್ಯದರ್ಶಿ.
7. ಸರ್ಕಾರಿ ನೌಕರರ ಸಂಘದ ಪದಾಧಿಕಾರಿಗಳಾಗಿದ್ದು, ಜೇಷ್ಠತಾ ಘಟಕದೊಳಗೆ ಸದರಿ ಶಿಕ್ಷಕರ ಅಗತ್ಯತೆ ಇರುವ ಬೇರೆ ಶಾಲೆಗಳು ಇರದಿದ್ದಲ್ಲಿ.
8. ಮಾಜಿ ಸೈನಿಕರ ಪತ್ನಿಯರು.
9. ವಿಧವೆಯರು.
10. ತೀವ್ರತರ ಕಾಯಿಲೆ ಇರುವ ಪ್ರಕರಣಗಳು.

5. ಹೆಚ್ಚುವರಿ ಶಿಕ್ಷಕರನ್ನು ಜಿಲ್ಲೆಯೊಳಗೆ ಸ್ಥಳಾಂತರಿಸಲು ಶಿಕ್ಷಕರು ಅಗತ್ಯತೆಯಿರುವ ಶಾಲೆಗಳ ಪಟ್ಟಿ ಸಿದ್ದಪಡಿಸುವುದು :– ಹೆಚ್ಚುವರಿ ಶಿಕ್ಷಕರನ್ನು ಜಿಲ್ಲೆಯೊಳಗೆ ಸ್ಥಳಾಂತರಿಸಲು ಈ ಕೆಳಕಾಣಿಸಿದ ಆದ್ಯತೆಗೆ ಅನುಸಾರವಾಗಿ ಶಿಕ್ಷಕರ ಅಗತ್ಯತೆಯಿರುವ ಶಾಲೆಗಳ ಪಟ್ಟಿ ಸಿದ್ದಪಡಿಸತಕ್ಕದ್ದು.

1. ಮೊದಲನೆಯದಾಗಿ ಮೇಲೆ ತಿಳಿಸಿರುವ ಅನುಪಾತದಲ್ಲಿ ಶಿಕ್ಷಕರ ಹುದ್ದೆಯ ಅಗತ್ಯತೆ ಇರುವ ಕಿರಿಯ ಪ್ರಾಥಮಿಕ ಶಾಲೆಗಳು.
2. ಎರಡನೆಯದಾಗಿ ಮೇಲೆ ತಿಳಿಸಿರುವ ಅನುಪಾತದಲ್ಲಿ ಶಿಕ್ಷಕರ ಹುದ್ದೆಯ ಅಗತ್ಯತೆ ಇರುವ ಹಿರಿಯ ಪ್ರಾಥಮಿಕ ಶಾಲೆಗಳು.
3. ಅಲ್ಪ ಸಂಖ್ಯಾತ ಭಾಷಾ ಮಾಧ್ಯಮ ಸರ್ಕಾರಿ ಶಾಲೆಗಳಲ್ಲಿ ಕನ್ನಡ ಶಿಕ್ಷಕರ ಹುದ್ದೆ ಮಂಜೂರಾಗದಿದ್ದಲ್ಲಿ ಆ ಶಾಲೆಗೆ ಒಂದು ಕನ್ನಡ ಶಿಕ್ಷಕರ ಹುದ್ದೆಯನ್ನು ಸ್ಥಳಾಂತರಿಸುವುದು.
4. ಮಕ್ಕಳ ಶಿಕ್ಷಕರ ಅನುಪಾತಕ್ಕನುಗುಣವಾಗಿ ಶಿಕ್ಷಕರ ಅಗತ್ಯತೆ ಇರುವ ಶಾಲೆಗಳ ಪಟ್ಟಿ ಸಿದ್ದಪಡಿಸುವಾಗ ಯಾವುದೇ ಗ್ರಾಮೀಣ ಪ್ರದೇಶವನ್ನು ಒಳಗೊಳ್ಳದ ಜೇಷ್ಠತಾ ಘಟಕವಾಗಿದ್ದಲ್ಲಿ–'ಎ' ವಲಯದ ಶಾಲೆಗಳನ್ನು ಸೇರಿಸುವುದು.
5. ಕ್ರಮಸಂಖ್ಯೆ 2 ರಲ್ಲಿ ನಿಗದಿಪಡಿಸಿರುವಂತೆ ಸಿಬ್ಬಂದಿ ರಚನೆ ಅನ್ವಯ ಶಿಕ್ಷಕರ ಅಗತ್ಯತೆಯಿರುವ ಶಾಲೆಗಳು.

**6. ಹೆಚ್ಚುವರಿ ಶಿಕ್ಷಕರ ಆದ್ಯತಾಪಟ್ಟಿ ಸಿದ್ದಪಡಿಸುವಿಕೆ :–**

ಶಿಕ್ಷಕರ ಅವಶ್ಯಕತೆ ಇರುವ ಶಾಲೆಗಳ ಪಟ್ಟಿ ಸಿದ್ದಪಡಿಸಿದ ನಂತರ ಹೆಚ್ಚುವರಿ ಶಿಕ್ಷಕರ ಆದ್ಯತಾ ಪಟ್ಟಿ ಸಿದ್ದಪಡಿಸಲು ಈ ಕೆಳಕಾಣಿಸಿದ ಮಾರ್ಗಸೂಚಿ ಅನುಸರಿಸುವುದು. ಮೊದಲನೆಯದಾಗಿ ಪರಿಷ್ಕೃತ ಮಾನದಂಡದ ಪ್ರಕಾರ ಹೆಚ್ಚುವರಿ ಎಂದು ಗುರ್ತಿಸಿ ಅಂತಹ ಎಲ್ಲಾ ಶಿಕ್ಷಕರ ಸಾಮಾನ್ಯ ಪಟ್ಟಿ ಸಿದ್ದಪಡಿಸುವುದು. ಆದರೆ ಕೌನ್ಸಿಲಿಂಗ್ ನಡೆಸಲು ಕ್ರಮ ಸಂಖ್ಯೆ 5 ರಲ್ಲಿ ತಿಳಿಸಿರುವಂತಹ ಶಿಕ್ಷಕರ ಅಗತ್ಯತೆ ಇರುವ ಶಾಲೆಗಳಿಗೆ ಸ್ಥಳಾಂತರಿಸಬೇಕಾದ ಹುದ್ದೆಗಳ ಸಂಖ್ಯೆ ಹಾಗೂ ಜಿಲ್ಲೆಯ ಒಳಗೆ ಶಿಕ್ಷಕರ ಅಗತ್ಯತೆ ಇರುವ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಹೆಚ್ಚುವರಿ ಶಿಕ್ಷಕರ ಆದ್ಯತಾ ಪಟ್ಟಿಯನ್ನು ಸದರಿ ಶಾಲೆಗಳಲ್ಲಿ ಹೆಚ್ಚು ಸೇವೆ ಸಲ್ಲಿಸಿರುವ ಶಿಕ್ಷಕರನ್ನು ಜನ್ಮದಿನಾಂಕದ ಆಧಾರದ ಮೇಲೆ ಈ ಕೆಳಕಂಡ ಆದ್ಯತಾ ಕ್ರಮದಲ್ಲಿ ಸಿದ್ದಪಡಿಸತಕ್ಕದ್ದು.

ಎ) ಪತಿ–ಪತ್ನಿ ಪ್ರಕರಣಗಳಲ್ಲಿ ಮಹಿಳೆಯರು
ಬಿ) ಪತಿ–ಪತ್ನಿ ಪ್ರಕರಣಗಳಲ್ಲಿ ಪುರುಷರು
ಸಿ) ಇತರೆ ಮಹಿಳಾ ಶಿಕ್ಷಕರು
ಡಿ) ಇತರೆ ಪುರುಷ ಶಿಕ್ಷಕರು

**7. ಹೆಚ್ಚುವರಿ ಶಿಕ್ಷಕರ ಹುದ್ದೆ ಸ್ಥಳಾಂತರಿಸುವ ಕ್ರಮ :–**

1) ಹೆಚ್ಚುವರಿ ಶಿಕ್ಷಕರ ಆದ್ಯತಾ ಪಟ್ಟಿಯನ್ನು ತಯಾರಿಸಿ, ಪ್ರಕಟಿಸಿ ಶಿಕ್ಷಕರಿಗೆ ಆಕ್ಷೇಪಣೆ ನೀಡಲು 15 ದಿನ ಕಾಲಾವಕಾಶ ನೀಡುವುದು.
2) ಆಕ್ಷೇಪಣೆ ಸ್ವೀಕರಿಸಿದ ನಂತರ ಲೋಪದೋಷಗಳನ್ನು ಸರಿಪಡಿಸಿ ಅಂತಿಮ ಆದ್ಯತಾ ಪಟ್ಟಿಯನ್ನು ಅಂತಿಮಗೊಳಿಸಿ ಪ್ರಕಟಿಸುವುದು.
3) ಹೆಚ್ಚುವರಿ ಎಂದು ಗುರುತಿಸಿದ ಶಿಕ್ಷಕರ ಆದ್ಯತಾ ಪಟ್ಟಿಯನ್ನು ಮುಂಚಿತವಾಗಿ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳ/ಉಪನಿರ್ದೇಶಕರ ಕಛೇರಿಯಲ್ಲಿ ಪ್ರಕಟಿಸುವುದು.

**8. ಹೆಚ್ಚುವರಿ ಶಿಕ್ಷಕರ ಕೌನ್ಸಿಲಿಂಗ್ :–**

ಹೆಚ್ಚುವರಿ ಶಿಕ್ಷಕರ ಸ್ಥಳ ನಿಯುಕ್ತಿ ಪ್ರಕ್ರಿಯೆಯನ್ನು ಪಾರದರ್ಶಕವಾಗಿ ಕೌನ್ಸಿಲಿಂಗ್ ಮೂಲಕ ನಡೆಸುವುದು. ಆದರೆ ಹೆಚ್ಚುವರಿ ಶಿಕ್ಷಕರ ಕೌನ್ಸಿಲಿಂಗ್ ಸಮಯದಲ್ಲಿ ಶಿಕ್ಷಕರ ಹಾಜರಾತಿ ಹಾಗೂ ಸ್ಥಳ ಆಯ್ಕೆ ಕಡ್ಡಾಯ. ಒಂದು ವೇಳೆ ಹೆಚ್ಚುವರಿ ಶಿಕ್ಷಕರು ಕೌನ್ಸಿಲಿಂಗ್‌ಗೆ ಗೈರು ಹಾಜರಾದಲ್ಲಿ ಹೆಚ್ಚುವರಿ ಶಿಕ್ಷಕರ ಕೌನ್ಸಿಲಿಂಗ್ ಪ್ರಕ್ರಿಯೆ ಮುಗಿದ ನಂತರ, ಪ್ರಕಟಿಸಲಾದ ಖಾಲಿ ಹುದ್ದೆಗಳ ಪೈಕಿ ಒಂದು ಖಾಲಿ ಹುದ್ದೆಗೆ ಅಥವಾ ಶಿಕ್ಷಕರ ಅಗತ್ಯತೆ ಇರುವ ಶಾಲೆಗೆ ಸಂಬಂಧಿಸಿದ ಉಪನಿರ್ದೇಶಕರು ಪ್ರಾಕ್ಸಿ ಕೌನ್ಸಿಲಿಂಗ್ ಮಾಡಿ ಆದೇಶವನ್ನು ನೋಂದಣಿ ಅಂಚೆ ಮೂಲಕ ಸಂಬಂಧಿಸಿದ ಶಿಕ್ಷಕರಿಗೆ ಕಳುಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪ್ರಭುಸ್ವಾಮಿ**

ಪಿ.ಆರ್. 1099

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಪ್ರಾಥಮಿಕ)

## EDUCATION SECRETARIAT

## ADDENDUM

No.ED 131 UNE 2009 (P-2) Bangalore, Dated 31st March, 2011

Sub: Issue of terms and conditions of appointment of Prof: Ambalike Hiriyanna, Special Officer, Karnataka State Janapada University.

In Item No.1 of Appendix to Government Order of even number dated 21-12-2010, the words appearing “shall be the period of six months or until further orders whichever is earlier” shall be deleted and inserted the words “is until further order” should be read after the words *Janapada University.*

By order and in the name of the Governor of Karnataka

PR No. 1100

**U.B. Ulavi**

Under Secretary to Government

Education Department (Universities)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಜನಸ್ಪಂದನ ಕೋಶ) ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 51 ಸಸಿವಿ 03 ದಿನಾಂಕ : 17–06–2003.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 51 ಸಸಿವಿ 03 ದಿನಾಂಕ : 23–12–2003.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 24 ಸಸಿವಿ 06 ದಿನಾಂಕ : 20–03–2006.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 30 ಸಸಿವಿ 07 ದಿನಾಂಕ : 21–05–2007.
5. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 543 ಸಅಸೇ 2007 ದಿನಾಂಕ : 11–06–2008.
6. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 212 ಸಅಸೇ 2010 ದಿನಾಂಕ : 26–04–2010.
7. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 310 ಎಸ್‌ಎಎಸ್ 2008 ದಿನಾಂಕ : 16–09–2009.
8. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಜನಸ್ಪಂದನ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 183ಜಸ್ಪಕೋ–ಎ 2010 ದಿನಾಂಕ : 19–07–2010 ಮತ್ತು 14–01–2011.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಧಾನ ಕಾರ್ಯದರ್ಶಿ (ಸಾರ್ವಜನಿಕ ದೂರುಗಳು) ಹುದ್ದೆಯನ್ನು ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಎರಡು ವರ್ಷಗಳ ಅವಧಿಗೆ ಸೃಜಿಸಲಾಗಿದ್ದು ಹಾಗೂ ಕಾಲಕಾಲಕ್ಕೆ ಈ ಹುದ್ದೆಗಳನ್ನು ಮುಂದುವರಿಸಿ, ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ : 26–05–2010 ರಿಂದ 1 ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ (8)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಜನಸ್ಪಂದನ) ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಆದೇಶದಲ್ಲಿ cadre post (ವೃಂದ ಹುದ್ದೆ) ಎಂದು ಗುರುತಿಸಿ ಆದೇಶ ಹೊರಡಿಸಿರುವುದರಿಂದ, ಆಪ್ತಶಾಖೆಯ ಪೂರಕ ಸಿಬ್ಬಂದಿ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಲಾಗಿದೆ. ಈ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 212 ಸಅಸೇ 2010, ಬೆಂಗಳೂರು, ದಿನಾಂಕ: 15–04–2011**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಜನಸ್ಪಂದನ ಕೋಶ) ಹುದ್ದೆ ಹಾಗೂ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ : 25–05–2011 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕ | 1 |
| 2. | ಪತ್ರಾಂಕಿತ ಆಪ್ತ ಸಹಾಯಕ/ಹಿರಿಯ ಶೀಘ್ರಲಿಪಿಗಾರ | 1 |
| 3. | ಶಾಖಾಧಿಕಾರಿ/ಹಿರಿಯ ಸಹಾಯಕ | 1 |

| | | |
|---|---|---|
| 4. | ಶೀಘ್ರಲಿಪಿಗಾರರು | 1 |
| 5. | ಕಿರಿಯ ಸಹಾಯಕ | 1 |
| 6. | ದಲಾಯತ್ | 2 |
| 7. | ವಾಹನ ಚಾಲಕ | 1 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10-07-1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್.ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

ಪಿ.ಆರ್. 1101

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಎಸ್‌ಜಿಎಸ್‌ವೈಯಡಿ 2010-11ನೇ ಸಾಲಿನ 6 ಜಿಲ್ಲಾ ಪಂಚಾಯತಿಗಳಿಗೆ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ಪುನರ್ವಿನಿಯೋಗೊಳಿಸಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜೆ 12022/1/2010 ಎಸ್‌ಜಿಎಸ್‌ವೈ-I(9) ದಿನಾಂಕ : 04-05-10 ಮತ್ತು (38) ದಿನಾಂಕ : 18-06-10.
2. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು ದಿನಾಂಕ : 04-08-2010.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 56 ಬಿಆರ್‌ಎಸ್ 2010 ದಿನಾಂಕ : 29-09-10.
4. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜೆ 12022/2/2010 ಎಸ್‌ಜಿಎಸ್‌ವೈ-I(88) ದಿನಾಂಕ: 18-11-2010.
5. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/3/2010 ಎಸ್‌ಜಿಎಸ್‌ವೈ-I(158) ದಿನಾಂಕ:24-12-2010.
6. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜೆ 12022/4/2010 ಎಸ್‌ಜಿಎಸ್‌ವೈ-I(175) ದಿನಾಂಕ:06-01-2011.
7. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜೆ 12022/5/2010 ಎಸ್‌ಜಿಎಸ್‌ವೈ-I(185) ದಿನಾಂಕ:19-01-2011.
8. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/6/2010 ಎಸ್‌ಜಿಎಸ್‌ವೈ-I(197) ದಿನಾಂಕ: 27-01-2011.
9. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/7/2010 ಎಸ್‌ಜಿಎಸ್‌ವೈ-I(206)ದಿನಾಂಕ: 28-01-2011.
10. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/8/2010 ಎಸ್‌ಜಿಎಸ್‌ವೈ-I(227) ದಿನಾಂಕ:25-02-2011.
11. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/9/2010 ಎಸ್‌ಜಿಎಸ್‌ವೈ-I(226) ದಿನಾಂಕ:25-02-2011.
12. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದಸಂಖ್ಯೆ: ಜೆ 12022/10/2010 ಎಸ್‌ಜಿಎಸ್‌ವೈ-I(235) ದಿನಾಂಕ:28-02-2011.
13. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದಸಂಖ್ಯೆ: ಜೆ 12022/06/2010 ಎಸ್‌ಜಿಎಸ್‌ವೈ-I(234) ದಿನಾಂಕ:28-02-2011.
14. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದಸಂಖ್ಯೆ: ಜೆ 12022/10/2010 ಎಸ್‌ಜಿಎಸ್‌ವೈ-I(251) ದಿನಾಂಕ: 07-03-2011.
15. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದಸಂಖ್ಯೆ: ಜೆ 12022/07/2010 ಎಸ್‌ಜಿಎಸ್‌ವೈ-I(252) ದಿನಾಂಕ:07-03-2011.
16. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು ದಿನಾಂಕ : 04-01-2011, 24-02-2011 ಮತ್ತು 14-03-2011.
17. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 426 ಬಿಆರ್‌ಎಸ್ 2010 ದಿನಾಂಕ : 24-03-2011.

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75 : 25ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ)ಯಡಿ 2010-11ನೇ ಸಾಲಿಗೆ ಒಂದನೇ ಕಂತಿನ ಅನುದಾನ ರೂ. 47,41,09,000 ಮತ್ತು ರೂ. 15,80,36,000 ಗಳನ್ನು ಅನುಕ್ರಮವಾಗಿ ಓದಲಾಗಿದೆ (1) ಮತ್ತು (2)ರಲ್ಲಿ ಬಿಡುಗಡೆ ಮಾಡಿವೆ.

ಎಸ್‌ಜಿಎಸ್‌ವೈ ಯಡಿ ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಜ್ಯದ ಮೈಸೂರು ಮತ್ತು ಕೊಪ್ಪಳ ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 28 ಜಿಲ್ಲಾ ಪಂಚಾಯತಿಗಳಿಗೆ ಓದಲಾಗಿದೆ (4) ರಿಂದ (15)ರ ವರೆಗಿನ ಪತ್ರಗಳಲ್ಲಿ ಒಟ್ಟು ರೂ. 31,57,95,000 ಗಳನ್ನು ಎರಡನೇ ಕಂತಿನ ಅನುದಾನವಾಗಿ ಹಾಗೂ ಚಿಕ್ಕಬಳ್ಳಾಪುರ, ದಾವಣಗೆರೆ ಮತ್ತು ಮಂಡ್ಯ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವಾಗ ರಾಜ್ಯದ ಪಾಲಿನ ಅನುದಾನ ಕಡಿಮೆ ಬಿಡುಗಡೆ ಮಾಡಿದ ಎಂಬ ಕಾರಣಕ್ಕಾಗಿ

ಕಡಿತಗೊಳಿಸಿದ್ದ ರೂ. 1,06,80,000 ಪೂರ್ವಸ್ಥಿಗೆ ತಂದು ಬಿಡುಗಡೆ ಮಾಡಿದ್ದು, ಒಟ್ಟಾರೆಯಾಗಿ 32,64,75,000 ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಅನುದಾನ ರೂ. 10,88,25,000 ಗಳನ್ನು ಬಿಡುಗಡೆ ಮಾಡಬೇಕಿತ್ತು. ಆದರೆ, 2010-11ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಕಾಯ್ದಿರಿಸಿದ ರಾಜ್ಯದ ಪಾಲಿನ ಅನುದಾನದ ಲಭ್ಯತೆಗೆ ಅನುಸಾರ ಸೀಮಿತಗೊಳಿಸಿ ರಾಜ್ಯದ 28 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತು ಹಾಗೂ Restoration of cut ಅನುದಾನ ಸೇರಿಸಿ ಒಟ್ಟು ರೂ. 7,28,83,000ಗಳನ್ನು ಓದಲಾಗಿದೆ (16)ರಲ್ಲಿ ಬಿಡುಗಡೆ ಮಾಡಿದೆ.

ಓದಲಾಗಿದೆ (17)ರಲ್ಲಿ ಆರ್ಥಿಕ ಇಲಾಖೆಯ ಮುನರ್ವಿನಿಯೋಗದ ಆದೇಶದಂತೆ ಬೆಳಗಾಂ, ಚಿತ್ರದುರ್ಗ ದಾವಣಗೆರೆ, ಹಾವೇರಿ, ಮಂಡ್ಯ ಮತ್ತು ಶಿವಮೊಗ್ಗ ಪಂಚಾಯತಿಗಳಿಗೆ ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ರಾಜ್ಯದ ಪಾಲಿನ ಅನುದಾನದ ಲಭ್ಯತೆಗೆ ಸೀಮಿತಗೊಳಿಸಿ ಎರಡನೇ ಕಂತಿನ ಅನುದಾನ ರೂ. 97,48,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ: 29-03-2011**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2010-11ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನಕ್ಕೆ ಸೀಮಿತಗೊಳಿಸಿ ರಾಜ್ಯದ ಪಾಲಿನ ಅನುದಾನ ರೂ. 97,48,000 ಗಳನ್ನು (ತೊಂಬತ್ತೇಳು ಲಕ್ಷದ ನಲವತ್ತೆಂಟು ಸಾವಿರ ಗಳು ಮಾತ್ರ) ಅನುಬಂಧದಲ್ಲಿ ತೋರಿಸಿರುವ ಆರು ಜಿಲ್ಲಾ ಪಂಚಾಯತಿಗಳಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

ಷರತ್ತುಗಳು :

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ-6 ಗ್ರಾಮ ಪಂಚಾಯತ್‌ಗಳು-01-ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2010-2011ನೇ (2501-01-198-6-01)" (ಲಿಂಕ್ ಕೋಡ್ 2501-01-800-0-07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ : 14-07-2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾಅಪ 14 ಎಸ್‌ಜೆವೈ 2007 ದಿನಾಂಕ : 18-04-2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2010-11ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 35 ಪಿಬಿಎಸ್ 2011 ದಿನಾಂಕ : 29-03-2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಅನುಬಂಧ

*ಸರ್ಕಾರದ ಆದೇಶದ ಸಂಖ್ಯೆ : ಗ್ರಾಅಪ 25 ಎಸ್‌ಜಿವೈ 2010, ಬೆಂಗಳೂರು, ದಿನಾಂಕ : 29–03–2011*

(ರೂ.ಗಳಲ್ಲಿ)

| ಕ್ರ ಸ ೦. | ಜಿ.ಪಂ. ಹೆಸರು | ಜಿ.ಪಂ. ಆಬ್ಜಕ್ಟ್ ಕೋಡ್ | ಡಿ.ಡಿ.ಓ ಕೋಡ್ | 2010–11ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ರಾಜ್ಯದ ಪಾಲು ಬಿಡುಗಡೆ ಮಾಡಲು ಜಿಲ್ಲಾ ಪಂಚಾಯತಿಗಳಿಗೆ ನಿಗದಿ ಪಡಿಸಿದ ಒಟ್ಟು ಅನುದಾನ (ಮೂಲ, ಹೆಚ್ಚುವರಿ ಹಾಗೂ ಪುನರ್ವಿನಿಯೋಗ) | ಈವರೆವಿಗೆ ಜಿಲ್ಲಾ ಪಂಚಾಯತಿಗಳಿಗೆ ಮಾಡಿರುವ ಅನುದಾನ (village haat ಸೇರಿ) | ಜಿಲ್ಲಾ ಪಂಚಾಯತಿಗಳಿಗೆ ನಿಗದಿಪಡಿಸಿದ ಅನುದಾನದಲ್ಲಿ ಈವರೆವಿಗೆ ಬಿಡುಗಡೆ ಗೊಳಿಸಿ ಬಿಡುಗಡೆಗಾಗಿ ಕಾಯ್ದಿರಿಸಿರುವ ಉಳಿಕೆ ಅನುದಾನ | 2010–11ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಟ್ಟು ಅನುದಾನ | 2010–11ನೇ ಸಾಲಿನಲ್ಲಿ ಕೇಂದ್ರದ ಪಾಲಿನ ಅನುದಾನಕ್ಕನು ಗುಣವಾಗಿ ರಾಜ್ಯ ಸರ್ಕಾರ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿರುವ ಅನುದಾನ | 2010–11ನೇ ಸಾಲಿನಲ್ಲಿ ರಾಜ್ಯ ಸರ್ಕಾರ ಎಸ್‌ಜಿಎಸ್‌ವೈ ಗಾಗಿ ಈವರೆವಿಗೆ ಬಿಡುಗಡೆ ಮಾಡಿರುವ ಅನುದಾನ | 2010–11ನೇ ಸಾಲಿನ ಅನುದಾನಕ್ಕಾಗಿ ರಾಜ್ಯದ ಆಯವ್ಯಯದಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಕಾಯ್ದಿರಿಸಿದ ಅನುದಾನಕ್ಕನುಸಾರ ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಬೆಳಗಾಂ | 413 | 2200ZZ0002 | 2,19,22,000 | 1,96,50,000 | 22,72,000 | 5,94,14,000 | 1,98,05,000 | 1,75,33,000 | 22,72,000 |
| 2 | ಚಿತ್ರದುರ್ಗ | 403 | 1600ZZ0001 | 1,26,74,000 | 1,14,00,000 | 12,74,000 | 3,36,94,000 | 1,12,32,000 | 99,58,000 | 12,74,000 |
| 3 | ದಾವಣಗೆರೆ | 451 | 1700ZZ0002 | 1,07,83,000 | 88,29,000 | 19,54,000 | 3,02,19,000 | 1,00,73,000 | 68,66,000 | 19,54,000 |
| 4 | ಹಾವೇರಿ | 463 | 2700ZZ0001 | 1,14,31,000 | 1,03,00,000 | 11,31,000 | 2,91,65,000 | 97,22,000 | 85,91,000 | 11,31,000 |
| 5 | ಮಂಡ್ಯ | 412 | 1100ZZ0001 | 1,28,28,000 | 1,10,00,000 | 18,28,000 | 2,97,81,000 | 99,27,000 | 74,60,000 | 18,28,000 |
| 6 | ಶಿವಮೊಗ್ಗ | 405 | 1400ZZ0002 | 1,31,01,000 | 1,18,12,000 | 12,89,000 | 3,76,56,000 | 1,58,61,000 | 95,05,000 | 12,89,000 |
| | ಒಟ್ಟು | | | 8,27,39,000 | 7,29,91,000 | 97,48,000 | 21,99,29,000 | 7,66,20,000 | 5,99,13,000 | 97,48,000 |

ಪಿ.ಆರ್. 1102

**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಎಸ್‌ಜಿಎಸ್‌ವೈ ವಿಶೇಷ ಯೋಜನೆಯಡಿ ಜೆ.ಎಸ್.ಎಸ್. ಮಹಾವಿದ್ಯಾಪೀಠ ಸಂಸ್ಥೆ, ಮೈಸೂರುಗೆ ಮಂಜೂರಾದ ಕೃಷಿ ಉದ್ಯಮ ಹಾಗೂ ಮಾರುಕಟ್ಟೆ ವ್ಯವಸ್ಥೆ ಮೂಲಕ ಬಡತನ ರೇಖೆಗಿಂತ ಕಡಿಮೆ ಇರುವ ಸ್ವಸಹಾಯ ಗುಂಪುಗಳ ಆದಾಯವೃದ್ಧಿ ಕುರಿತ ಯೋಜನೆಗೆ ರಾಜ್ಯದ ಪಾಲಿನ ಮೊದಲನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ ಜೆ–17022/1/2009–SGSY-II(SP) ದಿನಾಂಕ : 19–02–2010.
2. ಕಾರ್ಯನಿರ್ವಾಹಕ ಕಾರ್ಯದರ್ಶಿ, ಜೆಎಸ್‌ಎಸ್ ಮಹಾವಿದ್ಯಾಪೀಠ, ಮೈಸೂರು ರವರ ಪತ್ರ ಸಂಖ್ಯೆ ಜೆಎಸ್‌ಎಸ್/ಎಸ್‌ಜಿವೈ/ಸಾಅಬಿ/2010–11 ದಿನಾಂಕ : 27–05–2010.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ವಿಶೇಷ ಯೋಜನೆಯಡಿ ಮೈಸೂರು ಜಿಲ್ಲೆಯ ಜೆಎಸ್‌ಎಸ್ ಸಂಸ್ಥೆಯು ಸಲ್ಲಿಸಿದ ಕೃಷಿ ಉದ್ಯಮ ಹಾಗೂ ಮಾರುಕಟ್ಟೆ ವ್ಯವಸ್ಥೆ ಮೂಲಕ ಬಡತನ ರೇಖೆಗಿಂತ ಕಡಿಮೆ ಇರುವ ಸ್ವಸಹಾಯ ಗುಂಪುಗಳ ಆದಾಯವೃದ್ಧಿ ವಿಶೇಷ ಯೋಜನೆಯ ಪ್ರಸ್ತಾವನೆಗೆ ಮಂಜೂರಾತಿ ನೀಡಿರುತ್ತದೆ. ಸದರಿ ಯೋಜನೆಗೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಒಟ್ಟು ರೂ. 8,94,69,000 ಗಳಿಗೆ ಆರ್ಥಿಕ ಮಂಜೂರಾತಿ ನೀಡಿ, ಓದಲಾಗಿದೆ (1)ರನ್ವಯ ಮೈಸೂರು ಜಿಲ್ಲಾ ಪಂಚಾಯತಿಗೆ ಮೊದಲನೇ ಕಂತಿನ ಅನುದಾನವಾಗಿ ರೂ. 1,17,43,000 (ಒಂದು ಕೋಟಿ ಹದಿನೇಳು ಲಕ್ಷದ ನಲವತ್ತಮೂರು ಸಾವಿರಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿದೆ. ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75 : 25ರ ಅನುಪಾತದಲ್ಲಿ ಅನುದಾನ ಭರಿಸಬೇಕಾಗಿದೆ. ಇದರನ್ವಯ, ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಬಿಡುಗಡೆ ಗೊಳಿಸಿದ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಅನುದಾನ ರೂ. 39,14,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದರೆ, ರಾಜ್ಯದ 2010–11ನೇ ಸಾಲಿನ ಆಯವ್ಯಯದಲ್ಲಿ ಮೈಸೂರು ಜಿಲ್ಲಾ ಪಂಚಾಯತಿಗೆ ಒದಗಿಸಿದ ರಾಜ್ಯದ ಪಾಲಿನ ಅನುದಾನದ ಲಭ್ಯತೆಗೆ ಸೀಮಿತಗೊಳಿಸಿ ಮೊದಲನೇ ಕಂತಿನ ಅನುದಾನ 37,94,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 01 ಎಸ್‌ಜಿವೈ (SPL) 2009, ಬೆಂಗಳೂರು, ದಿನಾಂಕ: 30–03–2011**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ವಿಶೇಷ ಯೋಜನೆಯಡಿ 2010–11ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ಲಭ್ಯವಿರುವ ಅನುದಾನಕ್ಕೆ ಸೀಮಿತಗೊಳಿಸಿ ರಾಜ್ಯದ ಪಾಲಿನ ಅನುದಾನ ರೂ. 37,94,000 ಗಳನ್ನು (ಮೂವತ್ತೇಳು ಲಕ್ಷದ ತೊಂಬತ್ತನಾಲ್ಕು ಸಾವಿರ ರೂ. ಗಳು ಮಾತ್ರ) ಜೆಎಸ್‌ಎಸ್ ಸಂಸ್ಥೆಯ ವಿಶೇಷ ಯೋಜನೆಯಾದ ಕೃಷಿ ಉದ್ಯಮ ಹಾಗೂ ಮಾರುಕಟ್ಟೆ ವ್ಯವಸ್ಥೆ ಮೂಲಕ ಬಡತನ ರೇಖೆಗಿಂತ ಕಡಿಮೆ ಇರುವ ಸ್ವಸಹಾಯ ಗುಂಪುಗಳ ಆದಾಯವೃದ್ಧಿಯನ್ನು ಅನುಷ್ಠಾನಗೊಳಿಸುವ ಸಲುವಾಗಿ ಮೈಸೂರು ಜಿಲ್ಲಾ ಪಂಚಾಯತಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ |
|---|---|---|---|---|---|
| 1 | ಮೈಸೂರು | 407 | 0900ZZ0001 | 1,17,43,000 | 37,94,000 |

**ಷರತ್ತುಗಳು :** ಎಸ್‌ಜಿಎಸ್‌ವೈ ಮಾರ್ಗಸೂಚಿಯಂತೆ ಅನುದಾನವನ್ನು ಉಪಯೋಗಿಸುವುದು.

ಅನುಷ್ಠಾನ ಸಂಸ್ಥೆಗೆ ಸರ್ಕಾರ ಆದೇಶದ ದಿನಾಂಕದಿಂದ 15 ದಿವಸದೊಳಗೆ ಅನುದಾನ ಬಿಡುಗಡೆ ಮಾಡಲು ಕ್ರಮಕೈಗೊಳ್ಳುವುದು.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಸದರಿ ವಿಶೇಷ ಯೋಜನೆಗೆ ಮಂಜೂರಾತಿ ನೀಡುವಾಗ ನಿಬಂಧಿಸಿದ ಷರತ್ತುಗಳನ್ನು ತಪ್ಪದೇ ಪಾಲಿಸುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2010–2011ನೇ (2501–01–198–6–01)" (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ : 14–07–2005 ರನ್ವಯ ಸೂಚನೆಗಳನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡದೆ ಸ್ವೀಕೃತ ರಸೀದಿ (payees receipt) ಮೂಲಕ ಪಡೆದು ಎಸ್‌ಜಿಎಸ್‌ವೈ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ಚೆಕ್ ಮೂಲಕ ಸಂಬಂಧಪಟ್ಟ ಸಂಸ್ಥೆಗೆ ಬಿಡುಗಡೆ ಮಾಡತಕ್ಕದ್ದು.

ಮೈಸೂರು ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನ ಸೆಳೆಯಲು ಕಾನೂನು ರೀತ್ಯಾ ಅಧಿಕಾರ ನೀಡಲಾಗಿದೆ.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಅನುಷ್ಠಾನ ಸಂಸ್ಥೆಯಿಂದ ಪಡೆದು ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ರವರ ಸಹಮತಿ ಸಂಖ್ಯೆ : ಗ್ರಾಅಪ 35 ಪಿಬಿಎಸ್ 2011 ದಿನಾಂಕ : 30–03–2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1103

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಜ್ಯದಲ್ಲಿನ ಎನ್‌ಆರ್‌ಎಲ್‌ಎಂ ಅನುಷ್ಠಾನದ ಪೂರ್ವ ಸಿದ್ಧತೆಗಾಗಿ 2010–11ನೇ ಸಾಲಿನ ರಾಜ್ಯದ ಪಾಲಿನ ಅನುದಾನವನ್ನು ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ ಜೆ–20011/1/2010–ಎಸ್‌ಜಿಎಸ್‌ವೈ– (ಪಿಆರ್‌ಟಿ) ದಿನಾಂಕ : 18–01–2011.
2. ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು ಇದರ ಆದೇಶ ಸಂಖ್ಯೆ : ಎಫ್‌ಡಿ 426 ಬಿಆರ್‌ಎಸ್ 2010 ದಿನಾಂಕ : 24–03–2011.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ನ್ಯಾಷನಲ್ ರೂರಲ್ ಲೈವ್ಲಿಹುಡ್ ಮಿಷನ್ (ಎನ್‌ಆರ್‌ಎಲ್‌ಎಂ)ಅನ್ನು ರಾಷ್ಟ್ರಾದ್ಯಂತ ಜಾರಿಗೆ ತರಲು ನಿರ್ಧರಿಸಿದ್ದು, ಅದರಂತೆ ರಾಜ್ಯದಲ್ಲಿಯೂ ಯೋಜನೆಯನ್ನು ಜಾರಿಗೊಳಿಸಬೇಕಾಗಿದೆ. ಈ ಯೋಜನೆಯನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75 : 25ರ ಅನುಪಾತದಲ್ಲಿ ಭರಿಸುತ್ತವೆ. ಸದರಿ ಯೋಜನೆಯನ್ನು ರಾಜ್ಯದಲ್ಲಿ ಜಾರಿಗೊಳಿಸುವ ನಿಟ್ಟಿನಲ್ಲಿ, ಪೂರ್ವ ಸಿದ್ಧತೆಗಾಗಿ ಓದಲಾಗಿದೆ (1)ರನ್ವಯ ರೂ. 1,12,50,000 ರಾಜ್ಯದ ನಿಧಿಯಾಗಿ ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿದೆ.

ಇದರನ್ವಯ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ರೂ. 37,50,000 ಬಿಡುಗಡೆ ಮಾಡಬೇಕಾಗಿದೆ. ಈ ಅನುದಾನ ಬಿಡುಗಡೆ ಮಾಡಲು 2010–11ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಬೆಂಗಳೂರು ನಗರ ಜಿಲ್ಲಾ ಪಂಚಾಯತಿಯಲ್ಲಿ ಅನುದಾನ ಕಡಿಮೆ ಇದ್ದ ಕಾರಣ,

ಓದಲಾಗಿದೆ (2)ರಲ್ಲಿನ ಆದೇಶದನ್ವಯ ಪುನರ್ವಿನಿಯೋಗ ಮಾಡಿಕೊಂಡು ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ ರಾಜ್ಯದ ನಿಧಿಯಾಗಿ ರೂ. 37,50,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 44 ಎಸ್‌ಜೆವೈ 2010, ಬೆಂಗಳೂರು, ದಿನಾಂಕ: 29–03–2011**

ರಾಜ್ಯ ಸರ್ಕಾರವು, ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಮಿಷನ್ (ಎನ್‌ಆರ್‌ಎಲ್‌ಎಂ)ಯಡಿ ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ 2010–11ನೇ ಸಾಲಿನ ರಾಜ್ಯದ ಪಾಲಿನ ಅನುದಾನ ರೂ. 37,50,000 ಗಳನ್ನು (ಮೂವತ್ತೇಳು ಲಕ್ಷದ ಐವತ್ತು ಸಾವಿರ ಗಳು ಮಾತ್ರ)ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | ಬೆಂಗಳೂರು ನಗರ | 401 | 0100ZZ8001 | 1,12,50,000 | 37,50,000 |

**ಷರತ್ತುಗಳು :**

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2010–2011ನೇ (2501–01–198–6–01)" (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ : 14–07–2005 ರನ್ವಯ ಖಜಾನೆಯಿಂದ ಪಡೆಯುವುದು

ನ್ಯಾಷನಲ್ ರೂರಲ್ ಲೈವ್ಲಿಹುಡ್ ಮಿಷನ್ (ಎನ್‌ಆರ್‌ಎಲ್‌ಎಂ)ಯಡಿ ಬೆಂಗಳೂರು ನಗರ ಜಿಲ್ಲಾ ಪಂಚಾಯತಿಯಲ್ಲಿ ಕಾಯ್ದಿರಿಸಿರುವ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಅನುದಾನವನ್ನು ಬೇರೆ ಯಾವ ಉದ್ದೇಶಗಳಿಗೆ ಬಳಸದೆ, ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನೀಡುವ ಸೂಚನೆಯಂತೆ ವೆಚ್ಚ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯಾ ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ರವರ ಸಹಮತಿ ಸಂಖ್ಯೆ : ಗ್ರಾಅಪ 35 ಪಿಬಿಎಸ್ 2011 ದಿನಾಂಕ : 29–03–2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1104

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2010–11ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ. ಗ್ರಾಅಪ 01 ಡಬ್ಲ್ಯೂಜಿಪಿ 2010, ದಿನಾಂಕ : 20–4–2010.
2. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ. ಪಿಸಿ(ಪಿ) 19/125/ಕೆಎಆರ್/2010–ಡಬ್ಲ್ಯೂಜಿಎಸ್ ದಿನಾಂಕ : 10–8–2010.
3. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ. ಪಿಸಿ(ಪಿ)19/320/ಎಸ್‌ಸಿಎ/2010–ಡಬ್ಲ್ಯೂಜಿಎಸ್ ದಿನಾಂಕ : 7–3–2011.
4. ಆರ್ಥಿಕ ಇಲಾಖೆಯ ಜಮಾ ಧೃಡೀಕರಣ ಪತ್ರ : CCS No. FD 13. BGL-2010, ದಿನಾಂಕ : 14–3–2011.
5. ಆರ್ಥಿಕ ಇಲಾಖೆಯ ಮರು ಹೊಂದಾಣಿಕೆಯ ಆದೇಶ ಸಂಖ್ಯೆ : FD 432 BRS 2010, ಬೆಂಗಳೂರು, ದಿನಾಂಕ : 28–3–11.
6. ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ವ್ಹಿ.ಎಸ್. ಪಾಟೀಲ್ ರವರು ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರಿಗೆ ಬರೆದಿರುವ ಪತ್ರ ಸಂ. ವ್ಹಿ.ಎಸ್.ಪಿ/10–11, ದಿನಾಂಕ : 31–1–2011.
7. ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿರವರ ಟಿಪ್ಪಣಿ ಸಂ. PSCM/638/2011, ದಿನಾಂಕ : 1–2–2011

ಪ್ರಸ್ತಾವನೆ :

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನವನ್ನು ಮೇಲೆ ಓದಲಾದ ಪತ್ರ (1) ರಂತೆ 2010–11ನೇ ಸಾಲಿನಲ್ಲಿ ಮುಂದುವರೆಸಲಾಗಿದೆ. ಭಾರತ ಸರ್ಕಾರದ ಯೋಜನಾ ಆಯೋಗದ ಪಶ್ಚಿಮ ಘಟ್ಟಗಳ ಸಚಿವಾಲಯವು ಮೇಲೆ ಓದಲಾದ ಪತ್ರ (2) ರಲ್ಲಿ ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ 2010–11ನೇ ಸಾಲಿನಲ್ಲಿ ₹ 2924.00 ಲಕ್ಷಗಳ ವಾರ್ಷಿಕ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿರುತ್ತದೆ. ಇದರಲ್ಲಿ ಶೇ. 90 ಭಾಗ ಅಂದರೆ ₹ 2631.60 ಲಕ್ಷ ಕೇಂದ್ರ ಸರ್ಕಾರ ಬಿಡುಗಡೆ ಮಾಡಲಿರುವ ನಿಧಿ ರೂಪದ್ದಾಗಿದ್ದು, ಉಳಿಕೆ ಶೇ. 10 ಭಾಗ ಅಂದರೆ ₹ 292.40 ಲಕ್ಷ ರಾಜ್ಯದ ಪಾಲಾಗಿರುತ್ತದೆ. ಕೇಂದ್ರ ಸಚಿವಾಲಯವು ಮೇಲೆ ಓದಲಾದ ಪತ್ರ (3) ರಲ್ಲಿ ಪ್ರಸಕ್ತ ಸಾಲಿನ ಒಟ್ಟಾರೆ ಅನುದಾನ ₹ 2924.00 ಲಕ್ಷ ಪೈಕಿ ಶೇ. 90 ರಷ್ಟು ಅಂದರೆ ₹ 2631.60 ಲಕ್ಷ ಆಗಲಿದ್ದು, ಅದರಲ್ಲಿ ಎರಡನೇ ಮತ್ತು ಅಂತಿಮ ಕಂತಿನ ಬಾಬ್ತು

ಶೇ. 25 ರಷ್ಟು ಅಂದರೆ ₹ 657.90 ಲಕ್ಷಗಳನ್ನು ರಾಜ್ಯಕ್ಕೆ ಬಿಡುಗಡೆ ಮಾಡಿದೆ. ಈ ಅನುದಾನವು ರಾಜ್ಯ ಸರ್ಕಾರದ ಖಾತೆಗೆ ಜಮಾ ಆಗಿರುವ ಬಗ್ಗೆ ಆರ್ಥಿಕ ಇಲಾಖೆಯು ಮೇಲೆ ಓದಲಾದ ಪತ್ರ (4) ರಂತೆ ಜಮಾ ಧೃಡೀಕರಣ ಪತ್ರವನ್ನು ನೀಡಿರುತ್ತದೆ. ಈ ಅನುದಾನದ ಜೊತೆಗೆ ರಾಜ್ಯದ ಪಾಲಿನ ಶೇ. 10 ಅನುದಾನವಾದ ₹ 73.10 ಲಕ್ಷಗಳನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿದೆ ಮತ್ತು ಕೇಂದ್ರ ಸರ್ಕಾರದ ಯೋಜನಾ ಆಯೋಗದಿಂದ ಅನುಮತಿ PC (P) 19/125/KAR/2010-WGS, ದಿನಾಂಕ : 10–12–2010 ನೀಡಿದಂತೆ ಹಾಗೂ ಸರ್ಕಾರದ ಪುನರ್ವಿನಿಯೋಗದ ಆದೇಶ ಸಂ. ಗ್ರಾಅಪ. 1. ಪಘಯೋ. 2010, ಬೆಂಗಳೂರು, ದಿನಾಂಕ : 27–12–2010 ರಂತೆ ಉತ್ತರ ಕನ್ನಡ ಜಿಲ್ಲೆ ಯಲ್ಲಾಪುರ ತಾಲ್ಲೂಕಿನಲ್ಲಿ ಕೇಂದ್ರ ಸರ್ಕಾರದ ಯೋಜನಾ ಆಯೋಗ ಅನುಮೋದಿಸಲ್ಪಟ್ಟ ವಿಶೇಷ ಯೋಜನಾ ಅನುಷ್ಠಾನಕ್ಕಾಗಿ ಕ್ರಮವಾಗಿ ಚಿಕ್ಕಮಗಳೂರು ಜಿಲ್ಲೆಯಿಂದ ₹ 20.00 ಲಕ್ಷ ಮತ್ತು ಕೊಡಗು ಜಿಲ್ಲೆಯಿಂದ ₹ 69.41 ಲಕ್ಷಗಳನ್ನು ಪುನರ್ವಿನಿಯೋಗ ಮಾಡುವಂತೆ ಸೂಚಿಸಲಾಗಿತ್ತು. ಈ ಪೈಕಿ ಚಿಕ್ಕಮಗಳೂರು ಜಿಲ್ಲೆಯಿಂದ ಮಾತ್ರ ₹ 20.00 ಲಕ್ಷಗಳನ್ನು ಉತ್ತರ ಕನ್ನಡ ಜಿಲ್ಲೆಗೆ ವರ್ಗಾಯಿಸಲಾಗಿರುತ್ತದೆ. ಉಳಿದಂತೆ, ₹ 69.41 ಲಕ್ಷಗಳನ್ನು ಯೋಜನಾ ಅನುಷ್ಠಾನಕ್ಕಾಗಿ ಉತ್ತರ ಕನ್ನಡ ಜಿಲ್ಲೆಗೆ ನೀಡಬೇಕಾಗಿರುತ್ತದೆ ಮತ್ತು ಅಭಿವೃದ್ಧಿ ಯೋಜನಾ ಕೋಶದ ಸಿಬ್ಬಂದಿ ಮತ್ತು ಆಡಳಿತ ವೆಚ್ಚಕ್ಕೆ ₹ 14.50 ಲಕ್ಷಗಳನ್ನು ಬಿಡುಗಡೆ ಮಾಡಬೇಕಾಗಿರುತ್ತದೆ. ಈ ಮೊತ್ತದಲ್ಲಿ ₹ 7.50 ಲಕ್ಷಗಳು ರಾಜ್ಯ ಪಾಲಿನ ಮೊತ್ತವಾದ ₹ 73.10 ಲಕ್ಷಗಳಲ್ಲಿ ಸೇರಿರುತ್ತದೆ.

ಮೇಲೆ ತಿಳಿಸಿರುವ ಎಲ್ಲಾ ಅಂಶಗಳಿಗೆ ಅನುಗುಣವಾಗಿ ಅನುದಾನ ಬಿಡುಗಡೆ ಮಾಡಲು, ರಾಜ್ಯ ವಲಯದ ಉಳಿಕೆ ಮೊತ್ತ ₹ 469.12 ಲಕ್ಷ ಮತ್ತು ಜಿಲ್ಲಾ ವಲಯದಲ್ಲಿ ಮೀಸಲಿಟ್ಟಿರುವ ₹ 460.00 ಲಕ್ಷಗಳನ್ನು ಪರಿಗಣಿಸಿ ಒಟ್ಟಾರೆ ಲಭ್ಯವಿರುವ ₹ 929.12 ಲಕ್ಷಗಳಲ್ಲಿ ಪುನರ್ವಿನಿಯೋಗದ ಮೊತ್ತವು ಅಂದರೆ ಕೇಂದ್ರ ಸರ್ಕಾರದ ಯೋಜನಾ ಆಯೋಗವು ಉತ್ತರ ಕನ್ನಡ ಜಿಲ್ಲೆ ಯಲ್ಲಾಪುರ ತಾಲ್ಲೂಕಿನಲ್ಲಿ ವಿಶೇಷ ಯೋಜನಾ ಅನುಷ್ಠಾನಕ್ಕಾಗಿ ಮಂಜೂರಾತಿ ನೀಡಿರುವ ಮೊತ್ತ ₹ 89.41 ಲಕ್ಷ ಸೇರಿದಂತೆ ಒಟ್ಟಾರೆ ₹ 827.41 ಲಕ್ಷಗಳನ್ನು ಬಿಡುಗಡೆ ಮಾಡಬೇಕಾಗಿರುತ್ತದೆ. ಈ ಮೊತ್ತದಲ್ಲಿ ಕೇಂದ್ರ ಪಾಲಿನ ₹ 657.90 ಮತ್ತು ರಾಜ್ಯ ಪಾಲಿನ ಮೊತ್ತ ₹ 169.51 ಲಕ್ಷಗಳಷ್ಟು ಬಿಡುಗಡೆ ಮಾಡಲು ಆದೇಶಿಸಲಾಗಿರುತ್ತದೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 3 ಪಘಯೋ 2010 (ಭಾ), ಬೆಂಗಳೂರು, ದಿನಾಂಕ : 29–3–2011**

ಕೇಂದ್ರ ಪುರಸ್ಕೃತ ಕಾರ್ಯಕ್ರಮವಾದ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು 2010–11ನೇ ಸಾಲಿನಲ್ಲಿ ಅನುಮೋದಿತ ಕ್ರಿಯಾ ಯೋಜನೆಯ ಅನ್ವಯ ಅನುಷ್ಠಾನಗೊಳಿಸುವ ಸಲುವಾಗಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಎರಡನೇ ಹಾಗೂ ಅಂತಿಮ ಕಂತಿನ ಅನುದಾನ ₹ 657.90 ಲಕ್ಷ ಮತ್ತು ರಾಜ್ಯದ ಪಾಲಿನ ಶೇ. 10 ಅನುದಾನವಾದ ₹ 73.10 ಲಕ್ಷಗಳು, ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನಲ್ಲಿ ಕೇಂದ್ರ ಸರ್ಕಾರದ ಯೋಜನಾ ಆಯೋಗವು ಅನುಮೋದಿಸಲ್ಪಟ್ಟ ವಿಶೇಷ ಯೋಜನಾ ಅನುಷ್ಠಾನಕ್ಕಾಗಿ ಮತ್ತು ಪ.ಘ.ಯೋ. ರಾಜ್ಯ ಮಟ್ಟದ ಯೋಜನಾ ಕೋಶದ ವೆಚ್ಚ ₹ 14.50 ಲಕ್ಷಗಳು ಸೇರಿದಂತೆ ಈ ಮೊತ್ತದಲ್ಲಿ ₹ 7.50 ಲಕ್ಷಗಳು ರಾಜ್ಯ ಪಾಲಿನ ಮೊತ್ತವಾದ ₹ 73.10 ಲಕ್ಷಗಳಲ್ಲಿ ಸೇರಿರುತ್ತದೆ.

ಮೇಲಿನ ಎಲ್ಲಾ ಬಿಡುಗಡೆ ಅನುದಾನವು ಒಟ್ಟಾರೆ ₹ 827.41 ಲಕ್ಷಗಳನ್ನು (₹ ಎಂಟು ನೂರ ಇಪ್ಪತ್ತೇಳು ಲಕ್ಷ ಮತ್ತು ನಲವತ್ತೊಂದು ಸಾವಿರ ಮಾತ್ರ) ರಾಜ್ಯದ ಯೋಜನಾ ಅನುಷ್ಠಾನದ ಜಿಲ್ಲಾ ಪಂಚಾಯತಿಗಳಿಗೆ ಅನುಬಂಧ–1 ರಲ್ಲಿ ತೋರಿಸಿರುವಂತೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1. 2010–11ನೇ ಸಾಲಿನಲ್ಲಿ ನಿಮ್ಮ ಜಿಲ್ಲೆಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ನಮೂದಿಸಿರುವ ಕಾರ್ಯಕ್ರಮಗಳನ್ನು ಮಾತ್ರ ನಿಮ್ಮ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನಕ್ಕೊಳಪಟ್ಟು ಅನುಷ್ಠಾನಗೊಳಿಸುವುದು.
2. ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರವು ಕಾಲಕಾಲಕ್ಕೆ ಹೊರಡಿಸುತ್ತಿರುವ ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸುವುದು.
3. ಒಂದು ವಲಯಕ್ಕೆ ನಿಗದಿಪಡಿಸಿರುವ ಅನುದಾನವನ್ನು ಇನ್ನೊಂದು ವಲಯಕ್ಕೆ ಯಾವುದೇ ಕಾರಣಕ್ಕೂ ವರ್ಗಾಯಿಸಬಾರದು.
4. ಸಾಂಬಾರು ಮಂಡಳಿಯ ಕಾರ್ಯಕ್ರಮಗಳಿಗೆ ಪ್ರಸ್ತುತ ಕಂತಿನಲ್ಲಿ ಒದಗಿಸಿರುವ ಅನುದಾನ ₹ 3.20 ಲಕ್ಷಗಳನ್ನು ಆ ಮಂಡಳಿಗೆ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಯು ಬಿಡುಗಡೆ ಮಾಡುವುದು.
5. 2009–10 ನೇ ಸಾಲಿನಲ್ಲಿ ಬಿಡುಗಡೆ ಮಾಡಿದ ಅನುದಾನದಲ್ಲಿ ಖರ್ಚಾಗದೇ ಉಳಿದ ಅನುದಾನವನ್ನು 2010–11ನೇ ಸಾಲಿನಲ್ಲಿ ಕಡ್ಡಾಯವಾಗಿ ಮತ್ತು ಸಂಪೂರ್ಣವಾಗಿ ದಿನಾಂಕ : 30–3–2011 ರೊಳಗಾಗಿ ಖರ್ಚು ಮಾಡಿ ಪ್ರಗತಿ ವರದಿಯನ್ನು ತಪ್ಪದೇ ಕಳುಹಿಸುವುದು.
6. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲೇ ಪ್ರತಿ ತ್ರೈಮಾಸಿಕ ವರದಿಯನ್ನು ಸಕಾಲದಲ್ಲಿ ತಪ್ಪದೇ ಸರ್ಕಾರಕ್ಕೆ ಸಲ್ಲಿಸುವುದು. (Statement-I-Financial, Statement-II-Physical, verification report for beneficiary oriented schemes, verification report for schemes relating to construction works)
7. ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಸಹಾಯಾನುದಾನದ ಬಿಲ್ಲಿನ ಮೇಲೆ ನಿಯಮಗಳ ಪ್ರಕಾರ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಡಿಯಲ್ಲಿ ಖಜಾನೆಯಿಂದ ಪಡೆಯುವುದು.

2551–ಗುಡ್ಡಗಾಡು ಪ್ರದೇಶಗಳು–01 ಪಶ್ಚಿಮ ಘಟ್ಟಗಳು–001–ನಿರ್ದೇಶನ ಮತ್ತು ಆಡಳಿತ–0–01–ಯೋಜನಾ ಕೋಶ–059–ಇತರೆ ಖರ್ಚು (ಯೋಜನೆ)–2551-01-001-0-01-059, 2551-01-001-0-01-422 (SCP) ಮತ್ತು 2551-01-001-0-01-423 (TSP) ಮತ್ತು ದಕ್ಷಿಣ ಕನ್ನಡ ಮತ್ತು ಹಾಸನ ಜಿಲ್ಲೆಗಳಿಗೆ ಬಿಡುಗಡೆ ಮಾಡಿರುವ ಮೊತ್ತವನ್ನು 2551–01–198–6–02 ಜಿಲ್ಲಾ ವಲಯದಲ್ಲಿ ಮೀಸಲಿಟ್ಟಿರುವ ಲೆಕ್ಕಶೀರ್ಷಿಕೆಯಲ್ಲಿ ಮೊತ್ತವನ್ನು ಸೆಳೆಯುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎ. ಮೇಘಣ್ಣವರ**

ನಿರ್ದೇಶಕರು,

ಗ್ರಾಮೀಣ ಮೂಲಭೂತ ಸೌಲಭ್ಯಗಳು,

ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಅನುಬಂಧ–1

ಸರ್ಕಾರದ ಆದೇಶದ ಸಂ. ಗ್ರಾಅಪ 3 ಪಘಯೋ 2010 (ಭಾ) ಬೆಂಗಳೂರು, ದಿನಾಂಕ : 29–3–2011.
ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2010–11 ನೇ ಸಾಲಿನ ಜಿಲ್ಲಾವಾರು
ಎರಡನೇ ಕಂತಿನ ಅನುದಾನ ಬಿಡುಗಡೆ ತಃಖ್ತೆ (₹ ಲಕ್ಷಗಳಲ್ಲಿ)

| ಕ್ರ .ಸಂ. | ಜಿಲ್ಲೆಯ ಹೆಸರು | 2010–11ನೇ ಸಾಲಿನ ಜಿಲ್ಲಾವಾರು ಅನುದಾನ ಹಂಚಿಕೆ | ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗುತ್ತಿರುವ ಎರಡನೇ ಹಾಗೂ ಅಂತಿಮ ಕಂತಿನ ಅನುದಾನ | | | | ಕಾಲಂ 4ರ ಪೈಕಿ ಸಾಂಬಾರು ಮಂಡಳಿಗೆ ಬಿಡುಗಡೆ ಆಗಿರುವ ಅನುದಾನ |
|---|---|---|---|---|---|---|---|
| | | | 2551–01–001–0–01–059 ಇತರೆ ಖರ್ಚು | 2551–01–001–0–01–422 SCP | 2551–01–001–0–01–423 TSP | ಒಟ್ಟು ಮೊತ್ತ | |
| 1 | 2 | 3 | 4 | 5 | 6 | 7 | 8 |
| 1 | ಬೆಳಗಾಂ | 467.75 | 73.46 | 18.28 | 25.19 | 116.93 | – |
| 2 | ಚಾಮರಾಜನಗರ | 86.20 | 12.44 | 5.85 | 3.26 | 21.55 | – |
| 3 | ಚಿಕ್ಕಮಗಳೂರು* | 276.35 | 66.96 | 17.54 | 4.59 | 89.09 | – |
| 4 | ದಕ್ಷಿಣ ಕನ್ನಡ | 206.30 | 29.50 | 13.08 | 9.00 | 51.58 | – |
| 5 | ಧಾರವಾಡ | 67.20 | 12.51 | 1.90 | 2.40 | 16.81 | – |
| 6 | ಹಾಸನ | 221.65 | 25.57 | 27.40 | 2.44 | 55.41 | 0.88 |
| 7 | ಕೊಡಗು | 247.90 | 44.79 | 9.31 | 7.87 | 61.97 | 0.83 |
| 8 | ಮೈಸೂರು | 96.95 | 14.17 | 5.93 | 4.14 | 24.24 | – |
| 9 | ಶಿವಮೊಗ್ಗ | 410.45 | 78.29 | 19.32 | 5.00 | 102.61 | 0.82 |
| 10 | ಉತ್ತರ ಕನ್ನಡ ** | 516.40 | 178.76 | 12.71 | 7.04 | 198.51 | 0.67 |
| 11 | ಉಡುಪಿ | 296.85 | 59.06 | 8.86 | 6.29 | 74.21 | – |
| | ಒಟ್ಟು | 2894.00 | 595.51 | 140.18 | 77.22 | 812.91 | 3.20 |
| 12 | ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ ಯೋಜನಾ ಕೋಶ | 30.00 | 14.50 | 0.00 | 0.00 | 14.50 | – |
| | ಜುಮ್ಲಾ | 2924.00 | 610.01 | 140.18 | 77.22 | 827.41 | 3.20 |

* ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನಲ್ಲಿ ಯೋಜನಾ ಅನುಷ್ಠಾನಕ್ಕಾಗಿ ವರ್ಗಾವಣೆ ಮಾಡಿರುವ ಮೊತ್ತವಾದ ₹ 20.00 ಲಕ್ಷಗಳನ್ನು ಪುನಃ ತಮ್ಮ ಜಿಲ್ಲೆಗೆ ವರ್ಗಾಯಿಸಲಾಗಿದೆ.

** ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನಲ್ಲಿ ಯೋಜನಾ ಅನುಷ್ಠಾನಕ್ಕಾಗಿ ಮಂಜೂರಾತಿಯಾಗಿರುವ ಒಟ್ಟಾರೆ ₹ 89.41 ಲಕ್ಷಗಳ ಪೈಕಿ ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಯಿಂದ ₹ 20.00 ಲಕ್ಷಗಳನ್ನು ವರ್ಗಾಯಿಸಲಾಗಿದ್ದು, ಉಳಿದಂತೆ ₹ 69.41 ಲಕ್ಷಗಳನ್ನು ಮಂಜೂರಾತಿ ಮೊತ್ತದಲ್ಲಿ ಭರಿಸಲು ಅನುದಾನ ಬಿಡುಗಡೆ ಮಾಡಲಾಗಿದೆ.

**ಪಿ.ಎ. ಮೇಘಣ್ಣವರ**
ನಿರ್ದೇಶಕರು,
ಗ್ರಾಮೀಣ ಮೂಲಭೂತ ಸೌಲಭ್ಯಗಳು,
ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1105

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ನಿಡಶೇಸಿ ಗ್ರಾಮದ ಶ್ರೀಮತಿ ಬಸಮ್ಮ ಯಂಕಪ್ಪ ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಗೆ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವ/ತಾ.ಸ–3/ಸ.ಇಂ–7/ನಿಡಶೇಸಿ/2010–11/1781, ದಿನಾಂಕ : 29–3–2011.

ಪ್ರಸ್ತಾವನೆ :

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ನಿಡಶೇಸಿ ಗ್ರಾಮದ ಶ್ರೀಮತಿ ಬಸಮ್ಮ ಯಂಕಪ್ಪ ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಅಂದಾಜಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12–11–2010 |
| ವಿಜಯ ಕರ್ನಾಟಕ ದಿನ ಪತ್ರಿಕೆ | 20–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು, ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಟೆಂಡರಿಗೆ ಇಡಲಾದ ಮೊತ್ತ | | | ರೂ. 6,53,888/– |
|---|---|---|---|
| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶರಣಪ್ಪ ಕರಡೆನಪ್ಪನವರ ಗುತ್ತಿಗೆದಾರರು | 8,33,959/– | 27.54 ಹೆಚ್ಚು |

ಮೇಲ್ಕಂಡಂತೆ ಶ್ರೀ ಶರಣಪ್ಪ ಕರಡೆನಪ್ಪನವರ, ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 27.54 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ನಂತರ ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 5.00 ಕ್ಕಿಂತ ಕಡಿಮೆ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 6,53,888/–ಗಳ ಮೇಲೆ ಶೇ 4.95ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 6,86,255/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ಏನೀಯೋ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 13–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ನಿಡಶೇಸಿ ಗ್ರಾಮದ ಶ್ರೀಮತಿ ಬಸಮ್ಮ ಯಂಕಪ್ಪ ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 6,53,888/–ಗಳ ಮೇಲೆ ಶೇ. 4.95 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 6,86,255/– ಗಳಿಗೆ (ಆರು ಲಕ್ಷದ ಎಂಭತ್ತಾರು ಸಾವಿರದ ಎರಡು ನೂರ ಐವತ್ತೈದು ರೂಪಾಯಿಗಳು ಮಾತ್ರ) ಶ್ರೀ ಶರಣಪ್ಪ ಕರಡೆನಪ್ಪನವರ, ಗುತ್ತಿಗೆದಾರರು ಇವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1106

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ಪುರ ಗ್ರಾಮದ ಶ್ರೀ ಗರಡೆಪ್ಪ. ತಂದೆ ಹನುಮಪ್ಪ (ಸ.ನಂ. 94ಸಿ) ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಗೆ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವ/ತಾ.ಸ–3/ಸ.ಇಂ–7/ಪುರ/2010–11/1783, ದಿನಾಂಕ : 29–3–2011.

ಪ್ರಸ್ತಾವನೆ :

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಪುರ ಗ್ರಾಮದ ಶ್ರೀ ಗರಡೆಪ್ಪ. ತಂದೆ ಹನುಮಪ್ಪ (ಸ.ನಂ. 94ಸಿ) ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಅಂದಾಜಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12–11–2010 |
| ವಿಜಯ ಕರ್ನಾಟಕ ದಿನ ಪತ್ರಿಕೆ | 20–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಟೆಂಡರಿಗೆ ಇಡಲಾದ ಮೊತ್ತ | | | ರೂ. 5,44,829/– |
|---|---|---|---|
| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ರಾಜಶೇಖರ ಐಲಿ, ಗುತ್ತಿಗೆದಾರರು | 8,17,635/– | 50.07 ಹೆಚ್ಚು |

ಮೇಲ್ಕಂಡಂತೆ ಶ್ರೀ ರಾಜಶೇಖರ ಐಲಿ, ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 50.07 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ನಂತರ ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 5.00 ಕ್ಕಿಂತ ಕಡಿಮೆ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 5,44,829/–ಗಳ ಮೇಲೆ ಶೇ 4.95 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 5,71,798/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 09 ಏನೀಯೋ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 13–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಪುರ ಗ್ರಾಮದ ಶ್ರೀ ಗರಡೆಪ್ಪ. ತಂದೆ ಹನುಮಪ್ಪ (ಸ.ನಂ. 94ಸಿ) ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 5,44,829/–ಗಳ ಮೇಲೆ ಶೇ. 4.95 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 5,71,798/–ಗಳಿಗೆ (ಐದು ಲಕ್ಷದ ಎಪ್ಪತ್ತೊಂದು ಸಾವಿರದ ಏಳು ನೂರ ತೊಂಭತ್ತೆಂಟು ರೂಪಾಯಿಗಳು ಮಾತ್ರ) ಶ್ರೀ ರಾಜಶೇಖರ ಐಲಿ, ಗುತ್ತಿಗೆದಾರರು ಇವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1107 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ಕುಷ್ಟಗಿ ಗ್ರಾಮದ ಹತ್ತಿರ ಶ್ರೀ ವೆಂಕಟೇಶ ಹನುಮಪ್ಪ ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಗೆ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವ/ತಾ.ಸ–3/ಸ.ಇಂ–7/ಕುಷ್ಟಗಿ/2010–11/1782, ದಿನಾಂಕ : 29–3–2011.

ಪ್ರಸ್ತಾವನೆ :

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಕುಷ್ಟಗಿ ಗ್ರಾಮದ ಹತ್ತಿರ ಶ್ರೀ ವೆಂಕಟೇಶ ಹನುಮಪ್ಪ ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಅಂದಾಜಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12–11–2010 |
| ವಿಜಯ ಕರ್ನಾಟಕ ದಿನ ಪತ್ರಿಕೆ | 20–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು, ಇವರ ಟೆಂಡರಿನ ವಿವರಗಳು ಕೆಳಕಂಡಂತಿವೆ.

<table>
<tr><td colspan="3">ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಟೆಂಡರಿಗೆ ಇಡಲಾದ ಮೊತ್ತ</td><td>ರೂ. 6,75,458/–</td></tr>
<tr><td>ಕ್ರ. ಸಂ.</td><td>ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್</td><td>ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ</td><td>ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ</td></tr>
<tr><td>1</td><td>ಮಲ್ಲಿಕಾರ್ಜುನ ನಾಯಕವಾಡಿ, ಗುತ್ತಿಗೆದಾರರು</td><td>7,84,249/–</td><td>16.10 ಹೆಚ್ಚು</td></tr>
<tr><td>2</td><td>ಮಂಜುನಾಥ ಅಭಿಗೇರಿ, ಗುತ್ತಿಗೆದಾರರು</td><td>8,51,532/–</td><td>26.06 ಹೆಚ್ಚು</td></tr>
</table>

ಮೇಲಿನ ವಿವರಗಳನ್ನು ಪರಿಶೀಲಿಸಿದಾಗ ಶ್ರೀ ಮಲ್ಲಿಕಾರ್ಜುನ ನಾಯಕವಾಡಿ, ಗುತ್ತಿಗೆದಾರರು ಟೆಂಡರ್‌ನಲ್ಲಿ ಕಡಿಮೆ ದರಗಳನ್ನು ನಮೂದಿಸಿರುವ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 16.10 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ನಂತರ ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 5.00 ಕ್ಕಿಂತ ಕಡಿಮೆ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 6,75,458/–ಗಳ ಮೇಲೆ ಶೇ 4.95 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 7,08,893/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 11 ಏನೀಯೋ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 13–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಕುಷ್ಟಗಿ ಗ್ರಾಮದ ಶ್ರೀ ವೆಂಕಟೇಶ ಹನುಮಪ್ಪ ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಟೆಂಡರ್ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 6,75,458/–ಗಳ ಮೇಲೆ ಶೇ. 4.95 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 7,08,893/– ಗಳಿಗೆ (ಏಳು ಲಕ್ಷದ ಎಂಟು ಸಾವಿರದ ಎಂಟು ನೂರ ತೊಂಭತ್ತಮೂರು ರೂಪಾಯಿಗಳು ಮಾತ್ರ) ಶ್ರೀ ಮಲ್ಲಿಕಾರ್ಜುನ ನಾಯಕವಾಡಿ, ಗುತ್ತಿಗೆದಾರರು ಇವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1108

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ಕಲಾಲಬಂಡಿ ಗ್ರಾಮದ ಹತ್ತಿರ ಶ್ರೀ ದುರುಗಪ್ಪ ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಗೆ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವ/ತಾ.ಸ–3/ಸ.ಇಂ–7/ಕಲಾಲಬಂಡಿ/2010–11/1780, ದಿನಾಂಕ : 29–3–2011.

ಪ್ರಸ್ತಾವನೆ :

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಕಲಾಲಬಂಡಿ ಗ್ರಾಮದ ಹತ್ತಿರ ಶ್ರೀ ದುರಗಪ್ಪ ಸಾಬಪ್ಪ ಹಾಗೂ ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಅಂದಾಜಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12–11–2010 |
| ವಿಜಯ ಕರ್ನಾಟಕ ದಿನ ಪತ್ರಿಕೆ | 20–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು, ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಟೆಂಡರಿಗೆ ಇಡಲಾದ ಮೊತ್ತ | | | ರೂ. 6,68,483/– |
|---|---|---|---|
| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಆದನಗೌಡ ಪಾಟೀಲ ಗುತ್ತಿಗೆದಾರರು | 8,32,689/– | 24.56 ಹೆಚ್ಚು |

ಮೇಲ್ಕಂಡಂತೆ ಶ್ರೀ ಆದನ ಗೌಡ ಪಾಟೀಲ, ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 24.56 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ನಂತರ ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 5 ಕ್ಕಿಂತ ಕಡಿಮೆ ದರಗಳಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 6,68,483/–ಗಳ ಮೇಲೆ ಶೇ 4.95 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 7,01,573 /– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 08 ಏನೀಯೋ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 13–4–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಕಲಾಲಬಂಡಿ ಗ್ರಾಮದ ಶ್ರೀ ದುರುಗಪ್ಪ ಹಾಗೂ ಇತರರ ಜಮೀನಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 6,68,483/–ಗಳ ಮೇಲೆ ಶೇ. 4.95 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 7,01,573/–ಗಳಿಗೆ (ಏಳು ಲಕ್ಷದ ಒಂದು ಸಾವಿರದ ಐದು ನೂರ ಎಪ್ಪತ್ತಮೂರು ರೂಪಾಯಿಗಳು ಮಾತ್ರ) ಶ್ರೀ ಆದನಗೌಡ ಪಾಟೀಲ, ಗುತ್ತಿಗೆದಾರರು ಇವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1109 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).